ರಾಷ್ಟ್ರೀಯ ಜೀವನ ಚರಿತ್ರೆ ಮಾಲೆ

# ಗುರು ನಾನಕ್

ಡಾ. ಗೋಪಾಲ ಸಿಂಗ್

ಅನುವಾದಕರು

ಪ್ರೊ. ಡಿ. ಜವರೇಗೌಡ



ನ್ಯಾಶನಲ್ ಬುಕ್ ಟ್ರಸ್ಟ್, ಇಂಡಿಯಾ

ದೇವರ ಮನುಷ್ಯರಾದ

**ಡಾ. ಎಸ್. ರಾಧಾಕೃಷ್ಣನ್ ಅವರಿಗೆ**

ನನ್ನ ಪ್ರೇಮ ಗೌರವಗಳ ಗುರುತಾಗಿ

ಸಮರ್ಪಿಸಿದೆ

# ಸಂದೇಶ

ಆತ್ಮಯಜ್ಞ ಮತ್ತು ಆದರ್ಶದ ಮೂಲಕ ಸಂಕಟದಲ್ಲಿರುವ ಮಾನವಕೋಟಿಗೆ ಸತ್‌ಪಥವನ್ನು ತೋರಿಸುವ ಸಲುವಾಗಿ ಬೇಸತ್ತ ಜಗತ್ತಿನಲ್ಲಿ ಗುರು ನಾನಕರಂತಹ ಸಂತರು ಆಗಾಗ್ಗೆ ಅವತರಿಸುತ್ತಾರೆ. ಭರತಖಂಡದ ಸಂಧಿಸಮಯದಲ್ಲಿ ಗುರು ನಾನಕರ ಸಂದೇಶ ದಿವ್ಯಾಶೀರ್ವಾದವಾಯಿತು. ಈ ಮಹಾ ಗುರುವಿನ ಜೀವನಚರಿತ್ರೆ ಮುಂದೆ ಸಹಸ್ರ ಸಹಸ್ರ ವರ್ಷಗಳ ಕಾಲ ಮಾನವಕೋಟಿಗೆ ಬೆಳಕು ನೀಡಲಿ, ಮಾರ್ಗ ದರ್ಶನ ಮಾಡಲಿ.

ಧರ್ಮಶಾಲಾ
31–3–1966

ದಲೈ ಲಾಮಾ

೧

"ಹಿಂದುವೂ ಅಲ್ಲ, ಮುಸ್ಲಿಮನೂ ಅಲ್ಲ; ಮನುಷ್ಯಜಾತಿ ಒಂದೇ ಒಂದು."

—ಗುರು ನಾನಕ್

ನಾನಕ್ ಹುಟ್ಟಿದಾಗ ವಯಸ್ಕನಂತೆ ನಕ್ಕನಂತೆ. ಅವನನ್ನು ಹೆರಿಗೆ ಮಾಡಿಸಿದ ಮುಸ್ಲಿಂ ಸೂಲಗಿತ್ತಿ ದೌಲ್ತಾನ್ ನೆರೆಹೊರೆಯವರಿಗೆ ಈ ಸಂಗತಿಯನ್ನು ತಿಳಿಸಿದಳಂತೆ. ನಾನಕನ ಅವತಾರ ಸಮಯದಲ್ಲಿ ಬಾನೆತ್ತರದಿಂದ ಹೊಮ್ಮಿದ ಸ್ವರ್ಗೀಯ ಗಾನವನ್ನು ಜ್ಞಾನಿಗಳು ಕೇಳಿಸಿಕೊಂಡರಂತೆ. ಧರ್ಮಶ್ರದ್ಧೆಯುಳ್ಳ ಇತಿಹಾಸಕಾರರು ಈ ವಿಷಯವನ್ನು ನಿರೂಪಿಸಿದ್ದಾರೆ. ಕುಲಪುರೋಹಿತ ಹರದಯಾಳ್ ಮಗುವನ್ನು ನೋಡಿದ ಕೂಡಲೆ ಕೈಜೋಡಿಸಿ ನಮಸ್ಕರಿಸಿದನಂತೆ. ಆ ಮಗು ಮುಂದೆ ರಾಜಯೋಗ್ಯವಾದ ವಿತಾನದ ಕೆಳಗೆ ರಾರಾಜಿಸುವುದಾಗಿಯೂ, ಅವನನ್ನು ಹಿಂದೂಮುಸ್ಲಿಮರು ಏಕರೀತಿಯಾಗಿ ಪೂಜಿಸುವುದಾಗಿಯೂ, ಪ್ರಕೃತಿಯ ಜಡವಸ್ತುಗಳೂ ಗೌರವದಿಂದ ಅವನ ಹೆಸರನ್ನುಚ್ಚರಿಸುವುದಾಗಿಯೂ ಆ ಕುಲಪುರೋಹಿತ ಭವಿಷ್ಯ ನುಡಿದಿದ್ದನು.

ಶೈಶವದಲ್ಲಿಯೇ ನಾನಕನನ್ನು ಶಾಲೆಗೆ ಕಳುಹಿಸಲಾಯಿತು. ಮೊದಲು ಹಿಂದೂ ಗುರುವಿನ ಬಳಿ ಓದುಬರಹವನ್ನು ಕಲಿತು, ಕೆಲವು ಪ್ರಾಥಮಿಕ ಗ್ರಂಥಗಳನ್ನು ವ್ಯಾಸಂಗಮಾಡಿದನು. ಅನಂತರ ಮುಸ್ಲಿಮ್ ಶಾಸ್ತ್ರರೊಬ್ಬರು ಅರೇಬಿಕ್ ಮತ್ತು ಪರ್ಷಿಯನ್ ಭಾಷೆಗಳನ್ನು ಕಲಿಸಿದರು. ಆದರೆ ನಾನಕ್ ದೀರ್ಘಕಾಲ ಶಾಲೆಯಲ್ಲಿ ನಿಲ್ಲಲಿಲ್ಲ. ಅವನು ಹತ್ತಿರದ ಅರಣ್ಯಗಳಲ್ಲಿ ಅಲೆದಾಡಿ, ಜ್ಞಾನಿಗಳೂ ವೃದ್ಧರೂ ಆದ ಪವಿತ್ರ ಪುರುಷರಿಂದ ಅನೇಕ ಧರ್ಮಗಳ ಮೂಲತತ್ತ್ವಗಳನ್ನರಿತನು. ಬಿಡುವು ಸಮಯದ ಬಹುಭಾಗವನ್ನವನು ಪರತತ್ತ್ವಸ್ವರೂಪನಾದ ಭಗವಂತನ ಧ್ಯಾನದಲ್ಲಿ ಕಳೆಯುತ್ತಿದ್ದನು. ತನ್ನ ಮಗ ಲೌಕಿಕ ವ್ಯವಹಾರಗಳಲ್ಲಿ ಯಶಸ್ವಿಯಾಗಬೇಕೆಂದು ಬಯಸುತ್ತಿದ್ದ ತಂದೆಗೆ ಇದರಿಂದ ಹೆದರಿಕೆಯಾಯಿತು.

ಶ್ರದ್ಧಾವಂತ ಭಕ್ತನ ಕೋಶದಲ್ಲಿ ಅವನ ಬಾಲ್ಯಜೀವನದ ಬಗೆಗೆ ಅನೇಕ

ಕಥೆಗಳು ಚಾಲ್ತಿಯಲ್ಲಿವೆ. ಹಿಂದೂ ಉಪಾಧ್ಯಾಯ ವರ್ಣಮಾಲೆಯನ್ನು ಕಲಿಯುವಂತೆ ಅವನಿಗೆ ಹೇಳಿದಾಗ ಅವನು ಅಂತ್ಯಾಕ್ಷರಿಯನ್ನೊ ವರ್ಣಾನುಕ್ರಮ ಪದ್ಯವನ್ನೊ ರಚಿಸಿ, ಪ್ರತಿಯೊಂದು ಅಕ್ಷರದ ರಹಸ್ಯವನ್ನು ವಿವರಿಸಿ, ಅದು ದೇವರ ಅಭೇದತ್ವವನ್ನೊ, ಅವನ ಅದ್ಭುತ ಸೃಷ್ಟಿಯನ್ನೊ, ಅಥವಾ ದೈವಶ್ರದ್ಧೆಯ ಆವಶ್ಯಕತೆಯನ್ನೊ ಸಂಕೇತಿಸುತ್ತದೆಂದು ಹೇಳುತ್ತಿದ್ದನಂತೆ. ಅಂಥದೊಂದು ಪದ್ಯವನ್ನವನು ತನ್ನ ಪರಿಣತ ವಯಸ್ಸಿನಲ್ಲಿ ರಚಿಸಿರಬೇಕೆಂದು ಕೆಲವರು ಊಹಿಸುತ್ತಾರೆ. ಸಿಕ್ಕರ ಪವಿತ್ರ ಗ್ರಂಥದಲ್ಲಿ ಸೇರಿರುವ ಆ ಪದ್ಯ ಪಕ್ವಾನುಭವಪೂರ್ಣವಾಗಿಯೂ, ವಿವೇಕಯುತವಾಗಿಯೂ, ಕಲಾತ್ಮಕವಾಗಿಯೂ ಇದೆಯೆಂಬುವೇ ಆ ಊಹೆಗೆ ಕಾರಣ. ವಯಸ್ಸಿನಿಂದ ಪರಿಪಕ್ವತೆ ಪ್ರಾಪ್ತವಾಗುತ್ತದೆಯೆ ?

ಏನಾದರೂ ನಾನಕ್ ಶಾಲೆಯಲ್ಲಿ ದೀರ್ಘಕಾಲ ಇದ್ದಂತೆ ತೋರುವುದಿಲ್ಲ. ಮಗ ವಿದ್ವಾಂಸನಾಗಲಾರನೆಂಬ ಸಂಶಯದಿಂದ ತಂದೆ ಅವನನ್ನು ದನ ಮೇಯಿಸುವ ಸಲುವಾಗಿ ಹಾಕಿದನು. ಈ ಕೆಲಸದಲ್ಲಿಯೂ ಅವನು ತಂದೆಯನ್ನು ನಿರಾಶೆಗೊಳಿಸಿದಂತೆ ಕಾಣುತ್ತದೆ. ಏಕೆಂದರೆ ಒಂದು ದಿನ ಆಕಳನ್ನು ಹೊರಗೆ ಬಿಟ್ಟು ತಾನು ಮಾತ್ರ ಧ್ಯಾನಮಗ್ನನಾಗಿ ಆಲದ ಮರದಡಿ ಕುಳಿತಿದ್ದನು. ಆಕಳು ಬೇರೆಯವರ ಜಮೀನಿನಲ್ಲಿ ಮೇಯುತ್ತಿದ್ದುವು. ನಷ್ಟಹೊಂದಿದ ರೈತ ಅವನ ತಂದೆಗೆ ಆ ವಿಷಯವನ್ನು ವರದಿಮಾಡಿದನು. ತಂದೆ ತುಂಬ ಕ್ರುದ್ಧನಾದನು. ರಜಪೂತ ಮುಸ್ಲಿಮನಾದ ರಾಯ್ ಬುಲಾರ್ ಎಂಬ ಊರ ಗೌಡ ಇಡೀ ನಷ್ಟವನ್ನು ತುಂಬಿಕೊಡಲೊಪ್ಪಿ ಅವನ ಸಿಡಿಕೋಪವನ್ನು ತಣ್ಣಗೆ ಮಾಡಿದನು. ಎಳೆಯ ನಾನಕ್ ತನ್ನ ನೆರೆಹೊರೆಯವರಿಂದ ಪಡೆದ ವಿಶ್ವಾಸ ಇಂಥದಾಗಿತ್ತು. ಒಂದು ದಿನ ಅವನು ಹುಲ್ಲುಗಾವಲಿನಲ್ಲಿ ಮಲಗಿದ್ದಾಗ ಉರಿಬಿಸಿಲಿಂದ ರಕ್ಷಿಸುವ ಸಲುವಾಗಿ ಸರ್ಪ ಹೆಡೆಬಿಚ್ಚಿ ಕೊಡೆಹಿಡಿಯಿತೆಂಬುದಕ್ಕೆ ದಾಖಲೆಯಿದೆ. ಇದು ದೈವತ್ವದ ಚಿಹ್ನೆಯೆಂದು ಶ್ರದ್ಧಾವಂತರು ನಂಬಿದರು. ತನ್ನ ಕರ್ತವ್ಯಗಳ ಮತ್ತು ಜೀವನದ ಬಗೆಗೆ ಅವನು ನಿರಾಸಕ್ತನಾಗಿದ್ದದ್ದರಿಂದ ಅದೆಲ್ಲ ಹುಚ್ಚುತನದ ಕುರುಹೆಂದು ಅವನ ತಂದೆ ನಂಬಿದನು. ನಾನಕನ ಯಜ್ಞೋಪವೀತಧಾರಣೆಯ ಉತ್ಸವಕ್ಕಾಗಿ ಗ್ರಾಮಪುರೋಹಿತ ನಿಷ್ಕರ್ಷಿಸಿದ್ದ ಶುಭಮುಹೂರ್ತ ಸಾರಿ ಬಂತು. ದೂರದ ಮತ್ತು ಹತ್ತಿರದ

ಬಂಧುಬಳಗದವರು ಬಂದು ಸೇರಿದರು. ಅವನ ತಂದೆ ವಾಡಿಕೆಯಂತೆ ಆ ದಿನ ದೊಡ್ಡ ಹಬ್ಬವನ್ನು ಏರ್ಪಡಿಸಿದ್ದನು. ಆದರೆ ನೆರೆದಿದ್ದವರಿಗೆಲ್ಲ ಜುಲಾಬು ಆಶ್ಚರ್ಯಗಳಾಗುವಂತೆ ನಾನಕ್ ಯಜ್ಞೋಪವೀತಧಾರಣೆಯನ್ನು ನಿರಾಕರಿಸಿದನು. ಅದಕ್ಕಾಗಿ ದೊಡ್ಡವರು ಅವನನ್ನು ಛೀಮಾರಿ ಮಾಡಿದರು. "ಅಶುದ್ಧವಾದ, ಜೀರ್ಣವಾಗುವ, ಸುಟ್ಟುಹೋಗುವ, ಪರಲೋಕಕ್ಕೆ ಜೊತೆಗೆ ಬರದ ಈ ದಾರವನ್ನು ಧರಿಸಲಾರೆ" ಎಂದವನು ಉತ್ತರವಿತ್ತನು. ಜೀರ್ಣವಾಗದ ಮತ್ತು ಸುಡದ, ಇಲ್ಲಲ್ಲದೆ ಅಲ್ಲಿಯೂ ಸಲ್ಲುವ ದಾರ ಯಾವುವೆಂದು ಸುತ್ತಣ ಜನ ಜುಗುಪ್ಸೆಯಿಂದ ಪ್ರಶ್ನಿಸಿದರು. "ಕನಿಕರವೆ ಹತ್ತಿಯಾಗಿ, ತೃಪ್ತಿಯೆ ದಾರವಾಗಿ, ಸಂಯಮವೆ ಗಂಟಾಗಿ, ಸತ್ಯವೆ ಹುರಿಯಾಗಿ ಸಿದ್ಧಗೊಂಡದ್ದಾದರೆ ಅದು ಆತ್ಮನಿಗೆ ಆದರ್ಶವಾದ ಪವಿತ್ರವಾದ ದಾರವಾಗುತ್ತದೆ. ಇದು ಹರಿಯದು, ಸುಡದು, ಕೊಳೆಯಾಗದು, ನಾಶವಾಗದು, ಕಳೆದುಹೋಗದು. ಅಂಥ ದಾರವನ್ನು ಕೊರಳಲ್ಲಿ ಧರಿಸುವಾತನು ಭಗವಂತನ ಕೃಪೆಗೆ ಪಾತ್ರನಾಗುತ್ತಾನೆ" ಎಂದವನು ಉತ್ತರಿಸಿದನು.

ತಂದೆ ಈ ಔದ್ಧತ್ಯವನ್ನು ಸಹಿಸಲಿಲ್ಲ. ತನ್ನ ಚಿಕ್ಕಮಗನಿಂದಾಗಿ ತಾನು ಅಣಕಾವಮಾನಗಳಿಗೆ ಗುರಿಯಾಗಿದ್ದುದಾಗಿ ಭಾವಿಸಿದ್ದನು. ಆದ್ದರಿಂದ ಗುರುದಾಸಪುರ ಜಿಲ್ಲೆಯ ಬಾತಲ ನಿವಾಸಿ ಮೂಲಸೆಂಬುವನ ಮಗಳು ಸುಲಖಾನಿಯನ್ನು ತಂದುಕೊಂಡು ಹದಿನಾಲ್ಕರ ಎಳೆವಯಸ್ಸಿನ ಮಗನಿಗೆ ಮದುವೆಮಾಡಿದನು. ಅಸಾಮಾನ್ಯ ಮಕ್ಕಳನ್ನು ಪಡೆದ ಭಾರತೀಯ ಪಿತೃಪರಂಪರೆಯಂತೆಯೇ ಈ ತಂದೆಯೂ ಯೋಚಿಸಿದನು, ಈ ಉಪಾಯದಿಂದ ತನ್ನ ಮಗ ಗತ್ಯಂತರವಿಲ್ಲದೆ, ತನಗಾಗಲ್ಲದಿದ್ದರೂ ತನ್ನ ಹೆಂಡತಿ ಮಕ್ಕಳಿಗಾಗಿ ಈ ಪ್ರಪಂಚಕ್ಕೆ ಅಂಟಿಕೊಂಡಿರಬಹುದೆಂದು.

ಆದರೆ ಇದೂ ಪ್ರಯೋಜನವಾಗಲಿಲ್ಲ. ಬಹು ಬೇಗನೆ ಅವನ ಹೆಂಡತಿ ಶ್ರೀಚಂದ ಮತ್ತು ಲಕ್ಷ್ಮೀದಾಸರೆಂಬ ಇಬ್ಬರು ಮಕ್ಕಳನ್ನು ಪಡೆದರೂ ನಾನಕನ ಆತ್ಮ ಶಾಂತಗೊಳ್ಳಲಿಲ್ಲ. ಜೀವನೋಪಾಯಕ್ಕಾಗಿ ಅಂಗಡಿ ತೆರೆಯುವಂತೆ ಹೇಳಿ, ಹತ್ತಿರದ ಪೇಟೆಯಿಂದ ಸಾಮಾನು ಕೊಂಡು ತರುವ ಸಲುವಾಗಿ ಅವನ ತಂದೆ ಅವನಿಗೆ ದುಡ್ಡು ಕೊಟ್ಟನು. ಚುಹರ್‌ಕಾನೆಯ ಪೇಟೆಗೆ ಹೋಗುತ್ತಿದ್ದಾಗ ದಾರಿಯಲ್ಲಿ ಅವನು ಕೆಲವು ಸಾಧುಗಳನ್ನು ಸಂಧಿಸಿದನು. ಕೆಲವು

ದಿನಗಳಿಂದ ಹೊಟ್ಟೆಗೇನೂ ತಮಗೆ ದೊರೆತಿರಲಿಲ್ಲವೆಂದು ಅವರು ತಿಳಿಸಿದರು. ತನ್ನಲ್ಲಿದ್ದ ಹಣವನ್ನೆಲ್ಲ ಅವರಿಗೆ ಕೊಟ್ಟುಬಿಟ್ಟು ಬರಿಕೈಯಲ್ಲಿ ಅವನು ಊರಿಗೆ ಹಿಂದಿರುಗಿದನು. ತಂದೆಯ ಕೋಪಕ್ಕೆ ಹೆದರಿ ಅವನು ಊರಿನ ಹೊರವಲಯದಲ್ಲಿಯೇ ತಂಗಿದನು. ಸಾಮಾನಿಲ್ಲದೆ ಹಿಂದಿರುಗಿದ ಮಗನನ್ನು ಕುರಿತು ತಂದೆ ದುಡ್ಡೇನಾಯಿತೆಂದು ತರಾತುರಿಯಿಂದ ವಿಚಾರಿಸಿದನು. ಮಗ ಶಾಂತಚಿತ್ತನಾಗಿ ಉತ್ತರಿಸಿದನು : "ತಂದೆಯೆ, ಲಾಭದಾಯಕವಾದ ವ್ಯಾಪಾರ ಕುದುರಿಸುವಂತೆ ನೀನು ಹೇಳಿದ್ದೆ. ಹಸಿದವರಿಗೂ ಸಾಧುಸಂತರಿಗೂ ಅನ್ನ ಹಾಕುವುದಕ್ಕಿಂತ ಮಿಗಿಲಾದ ಕಾರ್ಯ ನಿನಗಾಗಲಿ ನನಗಾಗಲಿ, ಇಲ್ಲಾಗಲಿ ಅಲ್ಲಾಗಲಿ ಯಾವುದಿದೆ?" ಇಂಥ ಅಪ್ರಸ್ತುತವಾದ ಮತ್ತು ಅಸಾಮಾನ್ಯ ಉತ್ತರಕ್ಕಾಗಿ ತಂದೆ ಮಗನ ಕೆಂಡಿಮೇಲೆ ಒಂದೆರಡು ಏಟು ಕೊಟ್ಟನು.

ವ್ಯವಸಾಯ ಮಾಡುವಂತೆ ತಂದೆ ಮಗನಿಗೆ ಬುದ್ಧಿವಾದ ಹೇಳಿದನು. ಮಗ ಕೇಳಲಿಲ್ಲ. ಅವನು ಬೇರೊಂದು ರೀತಿಯ ಕ್ಷೇತ್ರದಲ್ಲಿ ಕೃಷಿಕರ್ಮನಿರತನಾಗಿದ್ದನು. ಅವನ ಕೃಷಿಕ್ಷೇತ್ರ ಎಂಥದ್ದೆಂದು ವಿಚಾರಿಸಲಾಗಿ ಅವನು ಹೀಗೆ ಉತ್ತರ ನೀಡಿದನು: "ಮನಸ್ಸೇ ನೇಗಿಲಿಗ, ಸತ್ಕರ್ಮಾಚರಣೆಯೆ ಕೃಷಿ, ದೈನ್ಯವೇ ನೀರಾವರಿ, ಶರೀರವೇ ಕ್ಷೇತ್ರ, ಭಗವನ್ನಾಮವೇ ಬೀಜ, ತೃಪ್ತಿಯೇ ಹಲುಬೆ, ಬಡತನವೆ ಬೇಲಿ. ಪ್ರೇಮದ ಆರೈಕೆಯಲ್ಲಿ ಈ ಬೀಜ ಮೊಳೆತು ಸತ್ಕರ್ಮವರ್ತಿಗಳ ಕಣಜಗಳನ್ನೆಲ್ಲ ತುಂಬುತ್ತದೆ. ಓ ತಂದೆಯೆ, ಐಶ್ವರ್ಯ ಇಡೀ ಪ್ರಪಂಚವನ್ನೆಲ್ಲ ಮರುಳುಮಾಡಿದೆ ; ಆದರೆ ಅದು ನಾವಿಲ್ಲಿಂದ ತೆರಳುವಾಗ ನಮ್ಮೊಡನೆ ಬರುವುದಿಲ್ಲ. ಈ ನಿಜವನ್ನು ತಿಳಿದ ಜನ ಬಹಳಿಲ್ಲ. ನನಗೆ ಮತ್ತು ನನ್ನ ಕುಟುಂಬಕ್ಕೆ ಮಾತ್ರವಲ್ಲ, ಇಡೀ ಪ್ರಪಂಚಕ್ಕೊದಗುವಷ್ಟನ್ನು ನನ್ನ ಕ್ಷೇತ್ರದಲ್ಲಿ ಬೆಳೆಯುತ್ತೇನೆ. ನನ್ನ ಕೈಯಾರೆ ನೀಡಿದ್ದನ್ನು ತಿಂದವನು ಮತ್ತೆ ಅತೃಪ್ತನಾಗಿರುವುದಿಲ್ಲ. ಈ ಭವದ ಅಥವಾ ಪೂರ್ವಭವದ ಸಾಲಸೋಲಗಳನ್ನೆಲ್ಲ ಅದು ತೀರಿಸಿಬಿಡುತ್ತದೆ. ಯಾರಿಗಾಗಿ ನಾನು ಹೊಲ ಉಳುತ್ತಿದ್ದೇನೆಯೊ, ಯಾರ ಬಾಡಿಗೆದಾರನೊ ನಾನು, ಅವನು ನನ್ನನ್ನು ಅನಾವೃಷ್ಟಿ ಹಾಗೂ ಪ್ರವಾಹಗಳಿಂದ ಕಾಪಾಡುತ್ತಾನೆ. ಎಂದೇ ಆಗಲಿ, ನಾನು ಕೇಳಿದಷ್ಟನ್ನು ಅವನು ನೀಡುತ್ತಾನೆ. ಅದರಿಂದಲೇ ನನಗೆ ತೃಪ್ತಿ. ಬೇರೇನೂ ಬೇಕಿಲ್ಲ."

ಈ ಉತ್ತರದಿಂದಾಗಿ ಕಾಲು ತುಂಬ ವಿಸ್ಮಯಗೊಂಡನು: "ಮಗನೆ, ನೀನು ಕಂಡಿರುವಂತೆ ನಾನು ನಿನ್ನ ಒಡೆಯನನ್ನು ಕಂಡಿಲ್ಲ. ನೀನು ಹುಚ್ಚನಾಗಿದ್ದೀಯೆಂದು ನೆಂಟರಿಷ್ಟರಲ್ಲಿ ಮಾತು ಹಬ್ಬಿದೆ. ಆದ್ದರಿಂದ ನಿನ್ನ ಹಿರಿಯರ ದಾರಿಯಲ್ಲಿ ನಡೆ. ಕೆಲಸವಿಲ್ಲದೆ ಯಾರುತಾನೆ ಬದುಕಿದ್ದಾರೆ? ತಂದೆ ತಾಯಿಯರ ಹೆಸರುಳಿಸುವ ಸಲುವಾಗಿ ನನ್ನ ಮಾತನ್ನು ನಡಸು. ಲೋಕದ ಮುಂದೆ ನಾನು ತಲೆತಗ್ಗಿಸದಂತೆ ವರ್ತಿಸು."

"ನನ್ನ ಒಡೆಯನನ್ನೊಮ್ಮೆ ನೋಡಿದವರು ಪ್ರಶಂಶಿಸುತ್ತಾರೆ, ಅವನಲ್ಲಿಯೇ ಶರಣಾಗತಿ ಹೊಂದುತ್ತಾರೆ" ಎಂದು ನಾನಕ್ ಉತ್ತರಿಸಿದನು. ಅವನೊಡೆಯನ ಬಗೆಗಿನ ತಪ್ಪು ತಿಳಿವಳಿಕೆಯನ್ನು ಹೋಗಲಾಡಿಸುವಂತೆ ಕಾಲು ಸಂಕಟದಿಂದ ಕೇಳಿಕೊಂಡನು. ಸುತ್ತಮುತ್ತಣ ಜನ ಸತ್ಯಸಂಗತಿಯನ್ನರಿತು ತನ್ನನ್ನಾಗಲಿ ತನ್ನ ಕುಟುಂಬವನ್ನಾಗಲಿ ಕೀಳ್ಗೆಸಬಾರದೆಂಬುದೇ ಅವನ ಉದ್ದೇಶವಾಗಿತ್ತು "ಅವನೊಂದು ದೊಡ್ಡವಸ್ತುವೆಂದು ಪ್ರತಿಯೊಬ್ಬರೂ ಕೇಳಿದ್ದಾರೆ, ಅವನನ್ನು ಅಂತೆಯೇ ಕರೆಯುತ್ತಾರೆ. ಅವನನ್ನು ಕಾಣಬಲ್ಲವನು ಮಾತ್ರ ಅವನ ಹಿರಿಮೆಯನ್ನು ತಿಳಿಯುತ್ತಾನೆ. ಓ ತಂದೆ, ನನ್ನೊಡೆಯನ ಸಾಮರ್ಥ್ಯವನ್ನಳೆಯಲಾಗದು. ಅವನನ್ನು ಪ್ರೀತಿಸುವವರು ಅವನಲ್ಲಿಯೆ ಲೀನವಾಗುತ್ತಾರೆ. ಹೋಲಿಕೆಗೆ ತಕ್ಕವರಿದ್ದರೆ ಅವನೊಡನೆ ಹೋಲಿಸಬಹುದಿತ್ತು. ಆದ್ದರಿಂದ ಅವನನ್ನು ಬಲ್ಲವರೆಲ್ಲರೂ ಹೇಳುತ್ತಾರೆ. 'ಓ ಪ್ರಭು, ನೀನು ಮಾತ್ರ ನೀನೆ ಆಗಿದ್ದೀಯೆ.'" ಹೀಗೆ ನಾನಕ್ ಉತ್ತರಿಸಿದನು.

ಅನಂತರ ನಾನಕ್‌ನ ತಾಯಿ ಬಂದಳು. ಮಗನ ತಲೆ ಸವರಿ, ಮುಂಡಾಡಿ, ತಂದೆಯ ಬುದ್ಧಿವಾದವನ್ನು ನಡೆಯಿಸುವಂತೆ ಹನಿಗಣ್ಣಾಗಿ ಮಗನನ್ನು ಬೇಡಿಕೊಂಡಳು: "ನೀನು ವಿವೇಕಶೂನ್ಯನೆಂದು ಜನ ತಿಳಿದುಕೊಳ್ಳುವಷ್ಟರ ಮಟ್ಟಿಗೆ ನಿನ್ನನ್ನು ನೀನು ಮರೆತುಬಿಟ್ಟಿದ್ದೀಯೆ. ಅವರು ನಿನ್ನನ್ನೂ ನಮ್ಮನ್ನೂ ಕುರಿತು ಆಡಿಕೊಳ್ಳುತ್ತಿದ್ದಾರೆ. ನನ್ನ ಚಿನ್ನ, ನಿನ್ನ ಮತ್ತು ನಮ್ಮ ಬಗೆಗೆ ಜನ ಒಂದು ಒಳ್ಳೆಯ ಮಾತು ಹೇಳಲೆಂಬುದೇ ನನ್ನ ಬಯಕೆ." ಮಂಜುಗಣ್ಣಾದ ನಾನಕ್ ತಾಯಿಗೆ ನಮಸ್ಕರಿಸಿ ನುಡಿದನು: "ತಾಯಿ, ಅಗ್ನಿಕುಂಡದ ಮೇಲಿರುವ ಜಗತ್ತನ್ನು ಸಂರಕ್ಷಿಸುವಂತೆ ನನಗೆ ಆ ಲೋಕದಿಂದ ಕರೆಬಂದಿದೆ. ಎಲ್ಲರೂ ಸುಟ್ಟು ಭಸ್ಮವಾಗಬೇಕೆಂಬುದು ನಿನ್ನ ಆಸೆಯೊ, ಅಥವಾ ಅದಷ್ಟು

ಜನ ಸರ್ವಭಕ್ಷಕ ಜ್ವಾಲೆಗಳಿಂದ ಮುಕ್ತನಾಗುವುದು ಲೇಸೊ, ಹೇಳು."

ನಾನಕ್ ಹಳಗಿಕೆಗೆ ದೂರವೆಂಬುದು ಎಲ್ಲರಿಗೂ ಮನದಟ್ಟಾಯಿತು. ವೈದ್ಯರು ಅವನನ್ನು ಪರೀಕ್ಷಿಸುವುದೆಂದು ಮನೆಯ ಹಿರಿಯರು ಸಲಹೆ ನೀಡಿದರು. ಮರುಕ್ಷಣವೆ ವೈದ್ಯನನ್ನು ಕರೆಸಲಾಯಿತು. ಅವರು ತನ್ನ ನಾಡಿಯನ್ನು ಹಿಡಿದಕೂಡಲೆ, ನಾನಕ್ ಮುಗುಳುನಗೆ ಬೀರುತ್ತ ನುಡಿದನು : "ಮಹಾನ್ ವೈದ್ಯರೆ, ನನ್ನ ನಾಡಿ ನೋಡಿದರೆ ಪ್ರಯೋಜನವೇನು ? ರೋಗ ಆತ್ಮದಲ್ಲಿಯೇ ಹೊರತು, ಶರೀರದಲ್ಲಿಲ್ಲ. ಓ, ಅರಿವುಳ್ಳವರೆ, ನಿಮಗೆ ನನ್ನ ಚಿಂತೆ ಬೇಡಿ. ನಿಮ್ಮ ಚಿಂತೆ ನಿಮಗಿರಲಿ. ತಾನೇ ತಾನಾಗದಿರುವವನು ನಿಮ್ಮ ಮದ್ದಿನಿಂದ ಗುಣಹೊಂದುವುದಿಲ್ಲ. ನನ್ನ ಪ್ರೇಮವೇ ರೋಗವಾಗಿ ಪರಿಣಮಿಸಿದೆ. ನಾನು ಯಾರ ಪ್ರೇಮಾರಾಧಕನೊ ಅವನಿಗೆ ನನ್ನ ಉದ್ಧಾರವೂ ಗೊತ್ತಿದೆ."

ವಿಸ್ಮಯಚಕಿತನಾದ ವೈದ್ಯ ಆತ್ಮದ ರೋಗವೆಂಥದೆಂಬುದನ್ನು ಕೇಳಿದಾಗ ನಾನಕ್ ಅತ್ಯಂತ ಗಹನವಾಕ್ಯಗಳಲ್ಲಿ ಉತ್ತರಿಸಿದನು : "ನಾನು ನನ್ನಿಂದಲೇ ಅಗಚಿ ಬದುಕುತ್ತಿರುವುದೊಂದು ರೋಗ; ನಾನೇನಾಗಿರಬೇಕಿತ್ತೊ ಅದನ್ನು ಅನ್ವೇಷಿಸುತ್ತಿರುವುದೇ ಮತ್ತೊಂದು; ಸರ್ವಶಕ್ತನಾದ ಮೃತ್ಯುದೂತನ ಕಣ್ಣೇಮೆಯಲ್ಲಿರುವುದೇ ಮಗುದೊಂದು; ನನ್ನೊಡನೆ ನಾನು ಕುಳ್ಳಿರದಿರುವುದೇ ನಾಲ್ಕನೆಯದು.

ಓ ಮಾನವ, ರೋಗ ಶರೀರದಲ್ಲಿಲ್ಲ; ಅದು ಆತ್ಮಸಂಬಂಧಿ. ಆತ್ಮಪರಿಶುದ್ಧಿ ಹಾಗೂ ಪೂರ್ಣತೆ, ಶಾರೀರಿಕಾರೋಗ್ಯ ಹಾಗೂ ಕ್ಷೇಮಕ್ಕೆ ದಾರಿಮಾಡಿ ಕೊಡುತ್ತದೆ."

ಮನುಷ್ಯನ ರೋಗಗಳಿಗೆ ಕಾರಣಗಳೇನೆಂದು ಕೇಳಿದಾಗ "ಭೋಗ; ಭೋಗಾನುಭವವೇ ಆತ್ಮದ ಕಾಯಿಲೆ. ಕಷ್ಟಸಹಿಷ್ಣುತೆಯೇ ಔಷಧ ದ್ರವ್ಯ" ಎಂಬುದಾಗಿ ಉತ್ತರಿಸಿದನು.

ವೈದ್ಯ ನಾನಕನಿಗೆ ತಲೆಬಾಗಿ "ಓ, ಎನ್ನೊಡೆಯ, ನಿನ್ನ ಮದ್ದು ನಿನ್ನಲ್ಲಿಯೇ ಇದೆ" ಎಂದನು. "ನಿನ್ನ ಜನ್ಮದಾತರಿಗೆ ನಿನ್ನಮೇಲೆ ಸ್ವಲ್ಪವಾದರೂ ಹಕ್ಕಿದೆ. ಅವರ ನಿರ್ಣಯಕ್ಕೆ ತಲೆಬಾಗುವುದಿಲ್ಲವೆ? ನಿನ್ನನ್ನು ಸಾಕಿಸಲಹಿದವರ ಮೇಲೆ ಕನಿಕರವಿಲ್ಲವೆ ?" ಎಂಬುದಾಗಿ ಅವನ ತಾಯಿ ತಂದೆಯರು ಕೊಟ್ಟ ಕೊನೆಯದಾಗಿ ವಾದಿಸಿದರು. ನಾನಕ್ ಉತ್ತರಿಸಿದನು :

ಯಾರು ತಂದೆಯೊ ಯಾರು ತಾಯಿಯೊ, ಎತ್ತಣಿಂ ಬಂದಿಹೆನೊ
ನಾನರಿಯೆ

ಬೆಂಕಿ ನೀರ್ಗಳಿ ಏಕೊ ನಾನರಿಯೆ ನನ್ನ ಪ್ರುದಕೆ
ಏನೊ ಪೀಡಿಸಿದೆಯೆನ್ನೆದೆಯ ಬೆಂಕಿಗದ್ದಂತೆ ಆತ್ಮ
ಎನ್ನೊಡೆಯನಿಚ್ಛೆಗೆ ಮಣಿಯುವುದೆ ಶಾಂತಿ, ಅದೆ ನನ್ನ ನೀತಿ
(ಗೌರಿ. ಎಂ. ೫. 7)

ನಾನಕ್ ತನ್ನ ಪರಿಸರಣವನ್ನು ಬದಲಾಯಿಸಿ ಸುಲ್ತಾನಪುರಕ್ಕೆ (ಇಂದಿನ ಕಪ್ಪೂರ್ತಲ ಜಿಲ್ಲೆಯಲ್ಲಿದೆ) ಹೋಗತಕ್ಕದ್ದೆಂದು ತಂದೆತಾಯಿಯರೂ ಊರಿನ ಗಣ್ಯರೂ ಯೋಚಿಸಿದರು. ಸುಲ್ತಾನಪುರದ ನವಾಬ ದೌಲತ್‌ಖಾನ್. ಅವನ ಉಗ್ರಾಣಿ ಜಯರಾಮನಿಗೆ ನಾನಕ್‌ನ ಸೋದರಿ ನಾನಕಿಯನ್ನು ಕೊಟ್ಟು ಮದುವೆಯಾಗಿತ್ತು. ನಾನಕನ ಹೆಂಡತಿಗೆ ಈ ವಿಷಯ ತಿಳಿದಾಗ "ನನ್ನನ್ನು ನಿಮ್ಮೊಡನೆ ಕರೆದೊಯ್ಯಿರಿ. ನೀವು ದೂರ ಸರಿದನಂತರ ನನ್ನನ್ನು ಮರೆತರೂ ಮರೆಯಬಹುದು. ಇಲ್ಲಿದ್ದಾಗಲೇ ನನ್ನನ್ನು ನೀವು ಗಮನಿಸಿಲ್ಲ. ದೂರ ಹೋದ ಮೇಲೆ ಕೇಳಬೇಕೆ? ನಿಮ್ಮ ನೆನಪಿನಿಂದ ನಾನು ಸಂಪೂರ್ಣವಾಗಿ ಅಳಿಸಿ ಹೋಗಬಹುದು" ಎಂದು ಸಂಕಟದಿಂದ ನುಡಿದಳು. ನಾನಕ್ ಮುಗುಳುನಗೆ ಸೂಸುತ್ತ ಹೇಳಿದನು: "ನಾನಲ್ಲಿ ನಿಂತು ಒಂದಿಷ್ಟು ಗಳಿಸಿ, ನಿನ್ನನ್ನು ಚೆನ್ನಾಗಿಟ್ಟುಕೊಳ್ಳಬಲ್ಲೆನಾದರೆ, ನಿನಗೆ ಹೇಳಿಕಳಿಸುತ್ತೇನೆ. ಇಲ್ಲವಾದರೆ ನಾನು ಬರುವತನಕ ಇಲ್ಲೇ ಇರು. ದೇವರು ನಿನ್ನನ್ನು ಕಾಪಾಡುತ್ತಾನೆ. ನಿನ್ನೊಡೆಯ ಯಾವಾಗಲೂ, ನಿನ್ನ ಹೃದಯದಲ್ಲಿರಲಿ." ಅನಂತರ ಅವಳು ತನ್ನಿಬ್ಬರು ಎಳಗೂಸುಗಳನ್ನು ಅವನ ಮುಂದೆ ನಿಲ್ಲಿಸಿದಳು. ನಾನಕ್ ಅವರನ್ನು ಎದೆಗಪ್ಪಿಕೊಂಡು ಹರಸಿದನು. ಆಮೇಲೆ ತನ್ನ ತಾಯಿತಂದೆಯರ ಚರಣಗಳಿಗೆ ನಮಸ್ಕರಿಸಿ ಅವರಿಂದ ಬೀಳ್ಕೊಂಡನು. ನಾನಕ್ ಲೋಕರೂಢಿಯಂತೆ ವರ್ತಿಸಲು ಸಮ್ಮತಿಸಿದ್ದಕ್ಕಾಗಿ ತಂದೆತಾಯಿಯರೂ ಹೆಂಡತಿಯೂ ಒಳಗೊಳಗೆ ಸಂತಸಗೊಂಡರು.

ನಾನಕ್ ಸುಲ್ತಾನಪುರವನ್ನು ಸೇರಿದನಂತರ ಅವನ ಭಾವನೆಂಟ ಅವನನ್ನು ನವಾಬನ ಸಮ್ಮುಖಕ್ಕೆ ಕರೆದೊಯ್ದನು. ಅವನ ವರ್ತನೆಯೂ

ಮುಗ್ಧ ಪ್ರಶಾಂತ ದೃಷ್ಟಿಗಳೂ ನವಾಬನ ಮನಸ್ಸಿನಮೇಲೆ ತುಂಬ ಪರಿಣಾಮ ಬೀರಿದುವು. ಅಂಥವನ ಕೈಯಲ್ಲಿ ತನ್ನ ಸಾಮಾನು ಸುರಕ್ಷಿತವೆಂದು ತಿಳಿದು, ನವಾಬ ಅವನನ್ನು ಆಳುಕಾಳುಗಳಿಗೆ ಪಡಿಕೊಡುತ್ತಿದ್ದ ಇಲಾಖೆಯ ಪಾರು ಪತ್ಯಗಾರನನ್ನಾಗಿ ನೇಮಿಸಿದನು. ನಾನಕ್ ಅತ್ಯಂತ ಪ್ರಾಮಾಣಿಕವಾಗಿ ಹಾಗೂ ಶ್ರಮವಹಿಸಿ ದುಡಿದನು. ತನ್ನ ಪಾಲಿನ ಭತ್ಯದ ಬಹುಭಾಗವನ್ನವನು ಉಗ್ರಾಣದ ಬಳಿಗೆ ಬಂದ ಸಾಧುಸಂತರಿಗೆ ಹಂಚುತ್ತಿದ್ದನು. ನಾನಕ್ ಅನಧಿಕೃತರಿಗೆ ರಾಜಭಂಡಾರವನ್ನು ಸಿಕ್ಕಾಬಟ್ಟೆ ಸೂರೆಗೊಡುತ್ತಿದ್ದನೆಂಬ ಗಾಳಿಸುದ್ದಿ ಕಾಡಿನ ಬೆಂಕಿಯಂತೆ ಹರಡಿತು. ತನ್ನ ಕೆಲಸ ಮುಗಿದನಂತರ ಅವನು ಸ್ತಿಮಿತನಾಗಿ ಹಾಗೂ ನಿರಾಸಕ್ತನಾಗಿ ಗಂಟೆಗಟ್ಟಲೆ ಕುಳಿತಿರುತ್ತಿದ್ದ ನೆಂದೂ, ಕೆಲಸದ ಕಾಲದಲ್ಲಿ ಸಾಮಾನು ತೂಗುತ್ತಿದ್ದಾಗ ಹದಿಮೂರರ ಸಂಖ್ಯೆ ಮುಟ್ಟಿದರೆ ಸಾಕು (ಹಿಂದೂಸ್ಥಾನಿಯಲ್ಲಿ 'ತೇರ' ಅಂದರೆ ಹದಿ ಮೂರೆಂತಲೂ ನಿನ್ನದೆಂತಲೂ ಅರ್ಥ.) 'ನಾನು ನಿನ್ನವನು.' (ಓ ದೇವರೆ ನಾನು ನಿನ್ನವನು ಎನ್ನುವ ಅರ್ಥದಲ್ಲಿ) ಎಂಬುದಾಗಿ ಸಾವಿರಸಾರಿಯಾದರೂ ಮಣಮಣಿಸುತ್ತಿದ್ದನೆಂದೂ ಜನ ನವಾಬನಿಗೆ ವರದಿಮಾಡಿದರು.

ಇಂಥ ವಿಚಿತ್ರ ಮನುಷ್ಯನನ್ನು ಕಟ್ಟಿಕೊಂಡು ಏನುಮಾಡುವುದೆಂದು ನವಾಬ ಯೋಚಿಸುತ್ತಿರುವಾಗಲೆ, ನಾನಕ್ ಮಂಗರಮಾಯವಾದನೆಂದು ಸುದ್ದಿ ಬಂದಿತು. ಒಂದು ದಿನ ಹತ್ತಿರದ ಹೊಳೆಯಲ್ಲಿ ಮೀಯಲೆಂದು ಹೋಗಿದ್ದಾಗ ಆನಂದಪರವಶನಾಗಿ ಮೂರುದಿನ ಮನೆಗೆ ಬರಲಿಲ್ಲವಂತೆ. ಅವನು ಮುಳುಗಿಕೊಂಡಿರಬೇಕೆಂದು ಜನ ಎಣಿಕೆಹಾಕುತ್ತಿರುವಷ್ಟರಲ್ಲಿ ಅವನು ಪ್ರತ್ಯಕ್ಷನಾದನಂತೆ. ಇಂಥ ಪರವಶತೆಯ ಸ್ಥಿತಿಯಲ್ಲೊಮ್ಮೆ ಭಗವಂತ ಪ್ರತ್ಯಕ್ಷನಾಗಿ "ಓ, ನಾನಕ್, ನೀನೆನ್ನ ಕೃಪೆಗೆ ಪಾತ್ರನಾಗಿದ್ದೀಯೆ. ಸದಾ ನಾನು ನಿನ್ನೊಡನಿರುತ್ತೇನೆ. ನಿನ್ನ ಹೆಸರು ಉಚ್ಚರಿಸಿದವರೂ ನನ್ನ ಕೃಪೆಗೆ ಪಾತ್ರರಾಗುತ್ತಾರೆ. ನೀನು ವಿಶಾಲ ಜಗತ್ತಿಗಿಳಿ; ಜನರಿಗೆ ನನ್ನ ಶಾಸನವನ್ನು ಬೋಧಿಸು. ಈಗ ನನ್ನ—ನಿನ್ನ ಹೆಸರು ಬೇರೆ ಬೇರೆಯಲ್ಲ. ನಿನ್ನ ಹರಕೆಯೆ ನನ್ನ ಹರಕೆಯಾಗುತ್ತದೆ. ನಾನೇ ನಿನ್ನ ಪರದೈವ. ಇನ್ನು ಮುಂದೆ ನಿನ್ನ ಹೆಸರು ಗುರುದೈವ ಎಂದಾಗಲಿ" ಎಂದು ಹೇಳಿದನು. ಭಗವಂತನ ಚರಣಗಳಿಗೆ ನಮಸ್ಕರಿಸಿದಾಗ ಅವನಿಗೆ ದೊರೆತದ್ದೊಂದು

ತುಂಡು ಪಂಚೆಯಂತೆ. ಪರವಶತೆಯಿಂದ ತಿಳಿದೆದ್ದು, ನಡುಪಂಚೆಯೊಂದೆ ಸರ್ವವಸ್ತ್ರವಾಗಿ ಪೇಟೆಗೆ ಬಂದಾಗ "ನಾನಿಲ್ಲಿ ಕಾಣುತ್ತಿರುವುದು ಹಿಂದೂ ಅಲ್ಲ, ಮುಸ್ಲಿಮನೂ ಅಲ್ಲ; ಮನುಷ್ಯ ಮಾತ್ರ" ಎಂದು ಸಾರಿದನು.

ಮತೀಯ ಘರ್ಷಣೆಯ ಅಂಧಕಾರಯುಗದಲ್ಲಿ ಇಂಥ ವಿಚಿತ್ರ ಘೋಷಣೆ ಖಾಜಿಯ ಭೀತಿ ಕುತೂಹಲಗಳನ್ನು ಕೆರಳಿಸಿತು. "ನಾನಕ್ ದೇವರ ಮನುಷ್ಯನಿದ್ದಂತೆ ಕಾಣುತ್ತದೆ. ಅವನ ಬದುಕಿನ ರೀತಿಯನ್ನು ಕಲಕ ಕೂಡದು" ಎಂಬುದಾಗಿ ನವಾಬ ನುಡಿದನು. ಆದರೆ ಖಾಜಿ ನಿಸ್ಸಂದೇಹಿ ಯಾಗಿರಲಿಲ್ಲ; ಅವನ ಉಪದೇಶ ರಾಜ್ಯದಲ್ಲಿ ಹೆಚ್ಚು ಗೋಜಲಿಗೆ ದಾರಿಮಾಡಿಕೊಡುತ್ತದೆಯೆಂದು ಸ್ಪಷ್ಟಪಡಿಸಿದನು. ನಾನಕ್‌ನನ್ನು ನವಾಬನ ಸಮ್ಮುಖಕ್ಕೆ ಬರಮಾಡಲಾಯಿತು. "ನಾನಕ್, ನೀನು ಹುಚ್ಚನಾಗಿದ್ದೀ ಯೆಂದು ಜನ ಹೇಳುತ್ತಾರೆ. ನಿನ್ನಂತೆ ಈ ಹಿಂದೆ ಯಾರೂ ವಿಚಿತ್ರವಾಗಿ ನುಡಿದಿರಲಿಲ್ಲ. ಇದಕ್ಕೇನು ಹೇಳುತ್ತೀಯೆ?" ಎಂದು ಖಾಜಿ ಪ್ರಶ್ನಿಸಿದನು. ಇತ್ತೀಚೆಗೆ ಸಂಗಾತಿಯಾದ ನೀಚವರ್ಗದ ಮುಸ್ಲಿಂ ಮದ್ದಲಿಗ ಮರ್ದನ ಸಂಗೀತ ನುಡಿಸುತ್ತಿರುವಾಗ ನಾನಕ್ ಸ್ತೋತ್ರಗೀತದ ಮೂಲಕ ಆ ಪ್ರಶ್ನೆಗೆ ಉತ್ತರ ನೀಡಿದನು :

"ಹುಚ್ಚ ನಾನೆಂದು ಕೆಲರು, ಹೆಜ್ಜೆ ತಪ್ಪಿದೆನೆಂದು ನುಡಿಯುವರು ಕೆಲರು
ನಾನೊಬ್ಬ ಹುಲುನರನ ಬಡವ ನೀಚನಹನೆಂದು ಮತ್ತೆ ಕೆಲರು
ನನ್ನೊಡೆಯ, ನನ್ನ ಪ್ರಭುಗಾಗಿ ಮರುಳಹೆನು ನಿಜ, ನರರೆ
ಇಲ್ಲ, ಅವನಿಗಿಂ ಮಿಗಿಲೊಬ್ಬನನು ಕಂಡಿಲ್ಲ!

ತನ್ನ ದೊರೆಗಿಂ ಮಿಗಿಲೆ ಪರದೈವವಿಲ್ಲೆಂದು ನಂಬಿದವ ಮೋಹ್
ದೈವಭೀತಿಗೆ ಸಂದವನೆ ಮರುಳ, ನಿಜಕು ಮರುಳ.

ದೊರೆಯಾಣತಿಗೆ ನೊಗವಾಗಿ, ಮತ್ತವನ ಸಂಕಲ್ಪಕ್ಕೆ ಶರಣಾಗಿ,
ಮೋಸವಿನಿತಿರದ ಪ್ರೇಮಕ್ಕೆ ಪಕ್ಕಾದವನೆ ಮರುಳ.

ಅನ್ಯದೈವವನು ಪ್ರೀತಿಸದ, ತನ್ನನುಳಿದೆಲ್ಲರೂ ಪವಿತ್ರಾತ್ಮರೆಂದೆನುವವನೆ
ನಿಜಕು ಮರುಳ.

"ಹೋಗಲಿ, ನನ್ನ ಮತವನ್ನೇಕೆ ಹೀಗಳೆಯುತ್ತೀಯೆ ?" ಎಂದು ಖಾಜಿ ಪ್ರಶ್ನಿಸಿದನು. ನಾನಕ್ ನೇರವಾದ ಧಾಟಿಯಲ್ಲಿಯೆ ಉತ್ತರವಿತ್ತನು :

"ಮುಸ್ಲಿಂ ಎಂದು ಕರೆಸಿಕೊಳ್ಳೆ ಸುಲಭ, ಅಂತಾಗುವುದು ಕಠಕಷ್ಟ !"

ಅವನ ಅಭಿಪ್ರಾಯದಲ್ಲಿ ಮುಸ್ಲಿಮನ ಕಲ್ಪನೆ ಏನಿರಬಹುದೆಂದು ಕೇಳಿದಾಗ ಅವನು ಕೆಳಕಂಡಂತೆ ಮಾರ್ನುಡಿದನು :

> "ಕರುಣೆಯೆ ಮಸೀದಿ, ಶ್ರದ್ಧೆಯೇ ಚಾಪೆ, ಋಜು ನಡೆಯೆ ಕುರಾನು ;
> ವಿನಯವೆ ಸುನತಿ, ಸಂಯಮವೆ ಉಪವಾಸ; ಇಂತಪ್ಪ ನಡೆಯುಳ್ಳವನೆ ಮುಸ್ಲಿಂ.
> ಸದಾಚಾರವೇ ಮಕ್ಕಾಯಾತ್ರೆ ; ನಿಜವೆ ಯಾತ್ರಿಕನ ಮಾರ್ಗದರ್ಶಿ ;
> ಪ್ರಭುಕೃಪೆಯೆ ಪ್ರಾರ್ಥನೆಯ ಗುರಿಯಾಗೆ, ಮತ್ತವನ ಸಂಕಲ್ಪವೇ ಜಪಮಣಿಯಾಗೆ
> ಭಕ್ತರಕ್ಷೆಗೆ ತಾನೆ ಹೊಣೆ ಹೊತ್ತು ನಿಲ್ಲುವನು.
>
> (ಮಾಜ್ ಎಂ.ಐ.)

ಅವನ ಮಿಗಿಲನ್ನು ತಾನೆ ನೋಡುವ ಸಲುವಾಗಿ ತನ್ನೊಡನೆ ಮಸೀದಿಯಲ್ಲಿ ಪ್ರಾರ್ಥನೆ ಸಲ್ಲಿಸುವಂತೆ ಖಾಜಿ ನಾನಕನನ್ನು ಕೇಳಿಕೊಂಡನು. "ದಿನದಲ್ಲಿ ಐದುಸಾರಿ ನೀವು ಪ್ರಾರ್ಥನೆ ಸಲ್ಲಿಸುತ್ತೀರಿ ; ಅಂತೆಯೇ ನಾನೂ. ಸತ್ಯಕ್ಕಾಗಿ, ಪ್ರಾಮಾಣಿಕ ಜೀವನಕ್ಕಾಗಿ, ಭಗವತ್ಕೃಪೆಗಾಗಿ, ಶುದ್ಧ ಹೃದಯಕ್ಕಾಗಿ ಮತ್ತು ದೈವಸ್ಮರಣೆಗಾಗಿ ನಾನು ಐದು ಸಾರಿ ಪ್ರಾರ್ಥಿಸುತ್ತೇನೆ" ಎಂದು ನಾನಕ್ ಉತ್ತರಿಸಿದನು. ಆದರೆ ಖಾಜಿಯನ್ನು ನಿರಾಶೆಗೊಳಿಸಲಾರದೆ ನಾನಕ್ ಪ್ರಾರ್ಥನೆಗಾಗಿ ಅವನೊಡನೆ ಮಸೀದಿಗೆ ತೆರಳಿದನು.

ಮಸೀದಿಯಲ್ಲಿ ನಮಾಜು ನಡೆಯುತ್ತಿದ್ದಾಗ ನಾನಕ್ ದೂರನಿಂತು ಮುಗುಳುನಗೆ ಸೂಸುತ್ತಿದ್ದನು. ನಮಾಜು ಮುಗಿದನಂತರ ಕೋಪಗೊಂಡ ಖಾಜಿ ಅವನ ಅಧಿಕಪ್ರಸಂಗಕ್ಕೆ ವಿವರಣೆ ಕೇಳಿದನು. ನಾನಕ್ ಮತ್ತೆ ನಕ್ಕು "ದೇವರಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದುದಾಗಿ ನೀವು ಹೇಳುತ್ತೀರಿ. ಅದು

ಸುಳ್ಳು. ನಿಮ್ಮ ಮೆಯ್ ಮಣಿದಿತ್ತು ; ಬಾಯಿ ಮಣಗುಡುತ್ತಿತ್ತು ; ನಿಮ್ಮ ಮನಸ್ಸು ಮಾತ್ರ ಕಾಬೂಲಿನಲ್ಲಿ ಜಾತಿಕುದುರೆಗಳ ಕೊಳ್ಳಾಟದಲ್ಲಿ ಮಗ್ನ ವಾಗಿತ್ತು" ಎಂದನು. ಈ ನಿಜವಾದ ಒರಟುತ್ತರದಿಂದ ಖಾಜಿ ರೇಗಿ ಹೋದನು. ಜನಸಮೂಹದ ನಡುವೆ ಹೆಚ್ಚು ಅವಮಾನಕ್ಕೆ ಗುರಿಯಾಗ ಬೇಕಾದೀತೆಂಬ ಭಯದಿಂದ ತೆಪ್ಪಗಾದನು. "ನಾನಕ್ ನಿನ್ನಂಥ ಫಕೀರ ನನ್ನ ವಜೀರನಾಗುವ ಕೃಪೆಯೊದಗಿದರೆ ನಾನು ಭಾಗ್ಯಶಾಲಿಯಾಗುತ್ತೇನೆ. ನನ್ನ ಬಳಿ ನಿಲ್ಲು. ನನ್ನ ಉಗ್ರಾಣವನ್ನು ತನಿಖೆ ಮಾಡಿದ್ದೇನೆ. ಏನೂ ಕಡಿಮೆ ಯಾಗಿಲ್ಲ. ಹೊಟ್ಟೆಕಿಚ್ಚಿನ ಜನ ನಿನ್ನನ್ನು ದೂರಿದರು. ನೀನಾರೆಂಬುದು ನನಗೆ ತಿಳಿದಿರುವುದರಿಂದ ನಿನ್ನನ್ನು ಹೋಗಗೊಡೆ" ಎಂದು ಸುಸಂತುಷ್ಟನಾದ ನವಾಬ ನುಡಿದನು. "ದೊರೆಯೆ ನಿಮ್ಮ ನಲ್ಮಾತಿಗೆ ನಾನು ಋಣಿ. ಆದರೆ ಇನ್ನು ಮೇಲೆ ನಿಮ್ಮ ಸೇವೆ ಸಾಧ್ಯವಿಲ್ಲ. ಮತ್ತೊಂದು ತ್ವರಿತ ಕರೆಗೆ ನಾನು ಓಗೊಡಬೇಕಾಗಿದೆ" ಎಂದು ನಾನಕ್ ಉತ್ತರಿಸಿದನು.

ನವಾಬ ಅವನಿಗೆ ನಮಸ್ಕರಿಸಿ "ನಿನ್ನ ಮತ್ತು ನಿನ್ನೊಡೆಯನ ನಡುವೆ ನಾನು ನಿಲ್ಲುವುದಿಲ್ಲ. ಭಗವಂತನ ಆಣತಿಯನ್ನು ನಡಸು, ಹೋಗು. ಪವಿತ್ರ ಗ್ರಂಥಗಳಲ್ಲಿ ವರ್ಣಿತವಾಗಿರುವ ದೇವರದರ್ಶನವನ್ನು ನಾನಿಂದು ನಿನ್ನಲ್ಲಿ ಕಂಡೆ. ನಾನೇನಾದರೂ ನಿನಗೆ ಸೇವೆ ಸಲ್ಲಿಸಬಲ್ಲೆನಾದರೆ, ಅದನ್ನು ತಿಳಿಸಬೇಕೆಂದು ವಿನಂತಿಮಾಡಿಕೊಳ್ಳುತ್ತೇನೆ. ಅಂಥ ಸೌಭಾಗ್ಯ ದೊರೆಯುವುದಾದರೆ ನಾನೇ ಧನ್ಯ" ಎಂದು ನುಡಿದನು. ಭಗವನ್ನಾಮ ವಿನಾ ತನಗಾವ ಆಶೆಯೂ ಇಲ್ಲ ವೆಂದು ನಾನಕ್ ತಿಳಿಸಿ, ಮರ್ದಾನನನ್ನು ಜೊತೆಯಲ್ಲಿ ಕರೆದುಕೊಂಡು ಫಕೀರರ ಸಂಗ ಸೇರಲು ಅರಣ್ಯಾಭಿಮುಖವಾಗಿ ಹೊರಟನು.

## ೨

"ಓ ಮಾನವ. ಭಗವಂತನೊಡನೆ ಯುಕ್ತಿ ಬಳಸಬೇಡ."

—ಗುರು ನಾನಕ್

ಮರ್ದನನೊಡನೆ ನಿರ್ಜನ ಪ್ರದೇಶದಲ್ಲಿ ನಡೆಯುತ್ತ ನಾನಕ್ ಪಂಜಾಬಿನ ನೈರುತ್ಯದಿಕ್ಕಿನಲ್ಲಿ ಬಹುದೂರ ಮುಂದರಿದನು. ಎಲ್ಲಿಯೂ ನಿಲ್ಲಲಿಲ್ಲ. ದಾರಿಯಲ್ಲಿ ಸಿಕ್ಕಿದ ಊರುಕೇರಿಗಳಲ್ಲಿ ತಂಗುತ್ತಿರಲಿಲ್ಲ. ಕಾಡು ಹಣ್ಣುಗಳಿಂದ ಹಸಿವು ನೀಗಿಕೊಳ್ಳುತ್ತಿದ್ದನು. ಆದರೆ ಹೊಟ್ಟೆಗೆ ಹಬ್ಬವಾಗುತ್ತಿರಲಿಲ್ಲವೆಂದು ಸಂಗಾತಿ ಗೊಣಗುತ್ತಿದ್ದನು. ಸಾಧುಗಳ ಸಂಗಮಾಡಿದ ಅಂಥ ಜನರ ಪಾಡೇ ಹಾಗೆ. ದೇವರ ದಾರಿ ಹಿಡಿದವನು ಸ್ವಾವಲಂಬಿಯಾಗಬೇಕೇ ಹೊರತು ಸಮಾಜದ ಭಿಕ್ಷೆಗೆ ಕೈಯೊಡ್ಡಬಾರದೆಂದು ಗುರು ಅವನನ್ನು ತರಾಟೆಗೆ ತೆಗೆದುಕೊಳ್ಳುತ್ತಿದ್ದನು. ಆದರೆ ಒಡೆಯನ ಬುದ್ಧಿವಾದದ ತಥ್ಯ ಅವನಿಗೆ ಒಪ್ಪಿಗೆಯಾಗುತ್ತಿರಲಿಲ್ಲ.

ಒಂದು ದಿನ ಹತ್ತಿರದ ಹಳ್ಳಿಗೆ ಹೋಗಬಹುದೆಂದು ನಾನಕ್ ಅವನಿಗೆ ಅನುಮತಿ ನೀಡಿದನು. ದೇವರ ಮನುಷ್ಯ ತಮ್ಮ ಹಳ್ಳಿಗೆ ಬಂದ ಸುದ್ದಿ ತಿಳಿದು ಹೆಂಗಸರು ಗಂಡಸರು ಆಶೀರ್ವಾದಕ್ಕಾಗಿ ಅವನ ಸುತ್ತ ಮುತ್ತಿಕೊಂಡರು. ಮರ್ದನ ಜನರನ್ನು ಬಹುವಾಗಿ ಹರಸಿದನು. ಅವರು ರುಚಿಕರವಾದ ವಿವಿಧ ಭಕ್ಷ್ಯಭೋಜ್ಯಗಳನ್ನೂ, ಹತ್ತಿ ಉಣ್ಣೆ ರೇಷ್ಮೆಯ ವಸ್ತ್ರಗಳನ್ನೂ ನಾನಾ ಬಗೆಯ ಸುಗಂಧದ್ರವ್ಯಗಳನ್ನೂ ಅವನಿಗೆ ಸಮರ್ಪಿಸಿದರು. ಮರ್ದನ ಸುಸಂತುಷ್ಟನಾಗಿ ಮೂಟೆ ಹೊತ್ತುಕೊಂಡು ನಿರ್ಜನ ಪ್ರದೇಶದಲ್ಲಿ ವಿಶ್ರಾಂತಿ ಪಡೆಯುತ್ತಿದ್ದ ಗುರುವಿನ ಬಳಿಗೆ ಓಡೋಡಿ ಬಂದನು. ಕಾಣಿಕೆಗಳ ಹೊರೆ ಹೊತ್ತುಕೊಂಡು ಬಂದಿದ್ದ ಸಂಗಾತಿಯನ್ನು ನೋಡಿ, ಮುಗುಳುನಗೆ ಬೀರಿ, ತನ್ನ ಅಪ್ಪಣೆಯನ್ನು ಮೀರಿದ್ದೇಕೆಂದು ನಾನಕ್ ಪ್ರಶ್ನಿಸಿದನು. ಮರ್ದನ ಕಿರಿಕಿರಿಯಾದನು ; ತನ್ನ ಭಕ್ತರನ್ನು ನಿರಾಶೆಗೊಳಿಸಲಾರದೆ ಅದನ್ನೆಲ್ಲ ತರಬೇಕಾಯಿತೆಂದನು. ಅಷ್ಟಾದರೂ ಅದನ್ನು ಹೊತ್ತುಕೊಂಡೇ ದಾರಿ

ಮುಂದುವರಿಸಿದನು. ಧರ್ಮಾರ್ಥವಾಗಿ ಕೊಟ್ಟರೆ ಅದು ಗುರುವನ್ನು ಮುಟ್ಟಿ ದೇವರನ್ನು ಸಂತೃಪ್ತಿಪಡಿಸುವುದಿಲ್ಲವೆ ಎಂದು ಕೇಳಿದನು.

ಅವರು ಮುಂದೆ ಮುಂದೆ ಪಯಣಿಸುತ್ತಿದ್ದಂತೆ ದಾರಿಯಲ್ಲಿ ಸಜ್ಜನನೆಂಬ ಹೆಸರಿನ ಸಾಧುವಿನಂತೆ ಕಾಣುತ್ತಿದ್ದ ದರೋಡೆಕೋರನನ್ನು ಸಂಧಿಸಿದರು. ಅವನು ಕೈಯಲ್ಲಿ ಜಪಸರವನ್ನು ಹಿಡಿದು, ಪಯಣಿಗರನ್ನು ನೋಡುವ ಸಲುವಾಗಿ ಮಾತ್ರ ಆಗಾಗ್ಗೆ ಮಾರ್ಜಾಲನೇತ್ರಗಳನ್ನು ಮಿಟುಕಿಸುತ್ತ ದಾರಿಯ ಬದಿಯಲ್ಲಿ ಕುಳಿತಿರುತ್ತಿದ್ದನು. ಅವನೊಬ್ಬ ಮುಸ್ಲಿಂ ಶೇಖ್. ಮಸೀದಿಯನ್ನಲ್ಲದೆ, ಹಿಂದುಗಳಿಗಾಗಿ ದೇವಾಲಯವನ್ನೂ ಕಟ್ಟಿಸಿದ್ದನು. ಯಾವ ಜಾತಿಯ ಪಯಣಿಗನೆ ಆಗಲಿ, ಅವನಿಂದ ಆತಿಥ್ಯವನ್ನು ಸ್ವೀಕರಿಸದೆ ಮುಂದುವರಿಯುವಂತಿರಲಿಲ್ಲ. ರಾತ್ರಿ ಬಲಿತಂತೆ ಅವರಲ್ಲಿದ್ದುದನ್ನೆಲ್ಲ ಕಸಿದುಕೊಂಡು, ಅವರ ಕೊರಳು ಕತ್ತರಿಸಿ, ಶವವನ್ನು ಹತ್ತಿರದ ಬಾವಿಗೆ ಬಿಸಾಡುತ್ತಿದ್ದನು. ಬೆಳಗಾಗ ಹೊರಗೆ ಬಂದು ಪರವಶನಾದವನಂತೆ ಜಪಮಣಿಯನ್ನೆಣಿಸುತ್ತ, ತನ್ನ ಹೊಲಸು ಸಂಚಿನ ಬಲಿಗಾಗಿ ತಾಳ್ಮೆಯಿಂದ ಕಾಯುತ್ತ ಕುಳಿತಿರುತ್ತಿದ್ದನು.

ಗುರುನಾನಕ್ ಮತ್ತು ಅವನ ಸಂಗಾತಿ ಕಣ್ಣಿಗೆ ಬಿದ್ದ ಕೂಡಲೆ ಅವನು ತನ್ನ ಪರಿವಾರದವರನ್ನು ಕುರಿತು "ಅವನನ್ನು ಚೆನ್ನಾಗಿ ನೋಡಿಕೊಳ್ಳಿ. ಶ್ರೀಮಂತನಂತೆ ಕಾಣುತ್ತಾನೆ. ಅವನ ಮುಖ ಶ್ರೀಮಂತಿಕೆಯ ಕಾಂತಿಯಿಂದ ಮಿಂಚುತ್ತಿದೆ" ಎಂದು ಆಜ್ಞಾಪಿಸಿದನು. ಅವರು ಹಾಗೆಯೇ ನೋಡಿಕೊಂಡರು. ಇರುಳು ಕವಿದೊಡನೆಯೆ ಮಲಗುವಂತೆ ಅವರು ನಾನಕನಿಗೆ ಹೇಳಿದರು. ಮೊದಲು ದೇವರನ್ನು ಕುರಿತ ಸ್ತೋತ್ರವೊಂದನ್ನು ಹಾಡಿ, ಅನಂತರ ನಿದ್ರಿಸುವುದಾಗಿ ನಾನಕ್ ನುಡಿದನು. ಎಲ್ಲರೂ ಅವನ ಸುತ್ತ ನೆರೆದರು. ಸಜ್ಜನ್ ನಾನಕನ ಮುಂದೆ ಕುಳಿತನು. ಮರ್ದನ ತನ್ನ ರಿಬೆಕ್ ತೆಗೆದುಕೊಂಡು ತನ್ನ ಚುರುಕು ಬೆರಳುಗಳನ್ನು ಅದರ ತಂತಿಗಳ ಮೇಲೆ ಆಡಿಸತೊಡಗಿದನು. ಸುಹಿ ರಾಗದಲ್ಲಿ ಪವಿತ್ರ ಸ್ವರಗಳು ಹೊರಹೊಮ್ಮುತ್ತಿದ್ದುವು. ನಾನಕ್ ತಲ್ಲೀನನಾಗಿ ಹಾಡಿದನು :

**"ಕಂಚಿನ ಪಾತ್ರೆ ಮಿರಮಿರನೆ ಮಿರುಗುತ್ತದೆ. ಅದನ್ನು ತಿಕ್ಕಿದಾಗ ಒಳಗಿನ ಕೊಳೆ ಹೊರಸೂಸುತ್ತದೆ. ಲೆಕ್ಕಾಚಾರಗಳೆಲ್ಲ ಫೈಸಲಾಗುವ ದೇವರ ಕೋರ್ಟಿನಲ್ಲಿ ನಮಗೆ ಒತ್ತಾಸೆಯಾಗಿ ನಿಲ್ಲದವರು ಗೆಳೆಯರೆಂದು ಕರೆಸಿಕೊಳ್ಳಲಾರರು**

ಹೊರಗೆ ಸುಣ್ಣಬಣ್ಣ ಬಳಿದು ಸಿಂಗರಿಸಿದರೆ ಪಾಳಿಗೆ ಬೆಲೆ ಬರುತ್ತದೆಯೆ? ಕೊಕ್ಕರೆಗಳು ನೀರಿನ ದಡಗಳಲ್ಲಿ ಧ್ಯಾನಶೀಲರಂತೆ ವಾಸಿಸುತ್ತವೆ; ಆದರೆ ಅವುಗಳ ಕಣ್ಣೆಲ್ಲ ಎಂದೂ ಆರದ ಹಸಿವಿಗೆ ಗುರಿಯಾದ ಬಲಿಯ ಮೇಲಿರುತ್ತದೆ. ಸಿಮ್ಮಾಲ್ ಮರ ಎಲೆ ಹೂ ಹಣ್ಣುಗಳಿಂದ ತುಂಬಿರುತ್ತದೆ; ಆದರೆ ಹಣ್ಣು ರುಚಿಯಿಲ್ಲ, ಹೂ ವಾಸನೆಯಿಲ್ಲ, ಎಲೆ ನೆರಳು ಕೊಡುವುದಿಲ್ಲ. ಕುರುಡ ತಲೆಯಮೇಲೆ ಮೂಟೆ ಹೊತ್ತುಕೊಂಡು ಕಡಿದಾದ ಹಾಗೂ ದೂರವಾದ ಬೆಟ್ಟವನ್ನೇರುತ್ತಾನೆ; ಆದರೆ ದೃಷ್ಟಿಯಿಲ್ಲದೆ ಅದರ ಎತ್ತರವನ್ನೆಂತು ಅಳೆಯುತ್ತಾನೆ? ಓ ನಾನಕ್, ಜಾಣತನ ಮತ್ತು ಸೋಗಿನ ಒಳ್ಳೆತನಗಳಿಂದೇನು ಪ್ರಯೋಜನ? ಭಗವಂತನ ನಾಮವೊಂದೇ ನಮ್ಮನ್ನು ರಕ್ಷಿಸಬೇಕು; ನಮ್ಮ ಕಾಲಿನ ಬೇಡಿಯನ್ನು ಕತ್ತರಿಸಬೇಕು."

ಈ ಅರ್ಥ ಬರುವ ಹೃದಯಸ್ಪರ್ಶಿಯಾದ ಸ್ತೋತ್ರವನ್ನು ಕೇಳಿದಾಗ ಸಜ್ಜನನ ಬಗೆ ಕದಡಿತು. ಅವನ ಆತ್ಮ ಜಾಗೃತಗೊಂಡು, ತನ್ನ ಹಿಂದಿನ ಹೇಯ ಕೃತ್ಯಗಳನ್ನು ನೆನೆದು ಹೇಸಿತು. ನಾನಕನ ಚರಣಗಳ ಮೇಲೆ ಬಿದ್ದು ಅವುಗಳನ್ನು ಬಿಗಿಯಾಗಿ ಅಪ್ಪಿಕೊಂಡನು: "ಓ ಒಡೆಯ, ನನಗೀಗ ಅರಿವು ನೀಡಿದ್ದೀಯೆ. ನನ್ನ ಹಿಂದಿನ ಪಾಪಕ್ಕೆ ಪ್ರಾಯಶ್ಚಿತ್ತವೇನು?" ಎಂದು ಅತ್ತನು. "ಭಗವಂತ ಎರಡು ರೀತಿಯಲ್ಲಿ ಮನುಷ್ಯನ ಹಿಂದಿನ ಪಾಪಕೃತ್ಯಗಳನ್ನು ಕ್ಷಮಿಸುತ್ತಾನೆ: ಒಂದು, ತನ್ನ ತಪ್ಪನ್ನು ತಾನು ಒಪ್ಪಿಕೊಳ್ಳಬೇಕು; ಎರಡು, ಅದಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು" ಎಂದು ಸಂತೈಸಿದನು. "ದೇವರಲ್ಲಿ ಭಕ್ತಿಯನ್ನು ನಟಿಸುತ್ತ ನೂರಾರು ಜನರನ್ನು ಸುಲಿಗೆ ಮಾಡಿದ್ದೇನೆ, ಅವರ ಕೊರಳು ಕತ್ತರಿಸಿದ್ದೇನೆ. ಮಿತಿಮೀರಿ ಐಶ್ವರ್ಯ ಗಳಿಸಿದ್ದೇನೆ. ಇದಕ್ಕೆಲ್ಲ ಪರಿಹಾರವಿದೆಯೆ?" ಎಂದು ಸಜ್ಜನ್ ಗೋಳ್ಗರೆದನು. "ಭಗವಂತನ ಹೆಸರಿನಲ್ಲಿ ನಿನ್ನಲ್ಲಿರುವುದನ್ನೆಲ್ಲ ಬಡವರಿಗೂ ಸಾಧುಗಳಿಗೂ ಹಂಚು" ಎಂದು ಗುರು ಹೇಳಿದನು. ಮಹತ್ಪರಿವರ್ತನೆಯ ಆ ಶುಭ ಮುಹೂರ್ತದಲ್ಲಿ ಗುರು ಹೇಳಿದ್ದನ್ನೆಲ್ಲ ಸಜ್ಜನ್ ನಡಸಿದನು. ಆ ಕ್ಷಣದಿಂದ ಅವನು ಭಗವಂತನ ಮಹಾಭಕ್ತನಾದನು; ನಾನಕ್ ಸ್ಥಾಪಿಸಿದ ಧರ್ಮಚಕ್ರದ ಪ್ರಪ್ರಥಮ ಪುರೋಹಿತನಾದನು. ಆ ಸುದ್ದಿ ಕೇಳಿದವರೆಲ್ಲ "ನಾನಕ್ ಮಹಾ ಪವಾಡವನ್ನು ಸಾಧಿಸಿದ್ದಾನೆ" ಎಂದು ವಿಸ್ಮಯಪಟ್ಟರು.

ಅಲ್ಲಿಂದ ನಾನಕ್ ಮತ್ತು ಅವನ ಸಂಗಾತಿ ಗಾಜ್ರಾನ್‌ವಾಲ ಜಿಲ್ಲೆಯ ಸಯ್ಯದ್‌ಪುರ (ಈಗಿನ ಎಮಿನಾಬಾದ್)ಕ್ಕೆ ಹೋಗಿ, ಕೀಳುಕುಲದ ಲಾಲೊ ಹೆಸರಿನ ಬಡಗಿಯ ಮನೆಯಲ್ಲಿ ತಂಗಿದರು. ಕ್ಷತ್ರಿಯ ವಂಶದ ಸಾಧುವೊಬ್ಬ ಅಸ್ಪೃಶ್ಯನ ಮನೆಯಲ್ಲಿ ಊಟಮಾಡಿದನೆಂಬ ವಾರ್ತೆ ಜನ ಜನಿತವಾಗಿ ಹರಡಿತು. ಮೇಲುಜಾತಿಯ ಸ್ಥಳೀಯ ಅಧಿಕಾರಿ, ಮಾಲಿಕ್ ಭಾಗೊ ಎನ್ನುವವನ ಕಿವಿಗೂ ಈ ಸುದ್ದಿ ಮುಟ್ಟಿತು. ಅವನು ದೊಡ್ಡದೊಂದು ಔತಣಕೂಟವನ್ನು ಏರ್ಪಡಿಸಿ, ದೂರದೂರದ ಸಾಧುಸಂತರನ್ನು ಆಹ್ವಾನಿಸಿದ್ದನು. ಮಹಾಭಕ್ತನೆಂಬುದಾಗಿ ಕೇಳಿದ್ದರಿಂದ ನಾನಕ್‌ನನ್ನೂ ಅವನು ಕರೆದಿದ್ದನು. "ಈ ನಮ್ಮ ಸುತ್ತಮುತ್ತ ಹೀನ ಕುಲಜರಲ್ಲಿ ಅತಿ ಹೀನರಿದ್ದಾರೆ. ನಾನಕ್ ಅವರ ಸಂಗಾತಿಯೇ ಹೊರತು ದೊಡ್ಡವರೊಡನೆ ಸ್ಪರ್ಧೆ ಹೂಡಲು ಬಯಸುವುದಿಲ್ಲ" ಎಂದು ನಾನಕ್ ಉತ್ತರಿಸಿ, ಔತಣಕೂಟದಲ್ಲಿ ಭಾಗ ವಹಿಸಲು ನಿರಾಕರಿಸಿದ್ದನು.

ಈ ಉತ್ತರದಿಂದ ಮಾಲಿಕ್ ತುಂಬ ರೇಗಿದನು. ತಾನಾಗಿಯೆ ಬರದಿದ್ದರೆ ತನ್ನ ಸಮ್ಮುಖಕ್ಕೆ ಬಲಾತ್ಕಾರದಿಂದಾದರೂ ಅವನನ್ನು ಬರಮಾಡುವುದೆಂದು ತನ್ನ ಆಳುಗಳಿಗೆ ಕಟ್ಟಪ್ಪಣೆ ಮಾಡಿದನು. ದೂತರ ಅಹಂಕಾರವನ್ನು ನೋಡಿದ ಗುರು ಮೊದಮೊದಲು ಕುಳಿತಲ್ಲಿಂದಲುಗಲು ನಿರಾಕರಿಸಿದನು; ಅವನಿಗೆ ಪಾಠ ಕಲಿಸಲು ಅದೊಂದು ಒಳ್ಳೆಯ ಸಮಯವೆಂದು ಅನಂತರ ತೋರಿದ್ದರಿಂದ ಆಹ್ವಾನವನ್ನೊಪ್ಪಿಕೊಂಡನು. ಆತಿಥೇಯನ ಮಹಾಸೌಧದಲ್ಲಿ ತನ್ನ ಮುಂದೊಡ್ಡಿದ ಊಟವನ್ನು ನಿರಾಕರಿಸಿದನು. ಕೀಳುಜಾತಿಯ ಬಡಗಿ ಕೊಟ್ಟ ಅನ್ನವನ್ನು ತಿಂದಾಗ ಬವಳಿ ಬರಲಿಲ್ಲವಂತೆ; ಆದರೆ ತುಂಬಿದ ಸಭೆಯ ಮುಂದೆ ಯಜಮಾನನನ್ನು ಅವಮಾನಿಸಿದ್ದೇಕೆಂದು ಅವನ ಕಡೆಯ ಜನ ಕೇಳಿದರು. "ನೀವು ನೀಡುತ್ತಿರುವ ಭೋಜನದಲ್ಲಿ ರಕ್ತದ ದುರ್ನಾತ ಹೊಡೆಯುತ್ತಿದೆ; ಆದರೆ ಬಡಗಿ ಲಾಲೊ ಕೊಟ್ಟ ಹಿಟ್ಟು ಹಾಲು ಜೇನುಗಳ ಸಂಗಮದಂತೆ ರುಚಿಯಾಗಿತ್ತು" ಎಂದು ಗುರು ಶಾಂತವಾಗಿ ಉತ್ತರಿಸಿದನು. ಅಂಥ ಅಸಂಬದ್ಧ ನಿರ್ಣಯಕ್ಕೆ ಆಧಾರವೇನೆಂದು ಪ್ರಶ್ನೆ ತಲೆಹಾಕಿತು. "ಲಾಲೊ ಬೆವರು ಸುರಿಸಿ ಸಂಪಾದಿಸುತ್ತಾನೆ. ತನ್ನ ಅಲ್ಪ ಸಂಪಾದನೆಯಲ್ಲಿಯೆ ದಾರಿಹೋಕರಿಗೆ, ಬಡವರಿಗೆ ಮತ್ತು ಸಾಧುಗಳಿಗೆ ಅಷ್ಟು ಇಷ್ಟು

ನೀಡುತ್ತಾನೆ. ಆದ್ದರಿಂದ ಅದು ರುಚಿ ಶುಚಿಗಳಿಂದ ಕೂಡಿರುತ್ತದೆ. ನೀನಾದರೋ ಕೆಲಸ ಮಾಡುವುದಿಲ್ಲ. ಲಂಚ ಸುಲಿಗೆ ಮತ್ತು ಅಧಿಕಾರ ದರ್ಪದ ಮೂಲಕ ಜನರ ರಕ್ತವನ್ನು ಹಿಂಡುತ್ತಿದ್ದೀಯೆ. ದೀನದಲಿತರ ಮತ್ತು ಮುಗ್ಧರ ರಕ್ತದಿಂದ ಅಂಥ ಆಹಾರ ಕಲುಷಿತವಾಗಿರುತ್ತದೆ."[1] ಎಂದು ಗುರು ಸ್ಪಷ್ಟಪಡಿಸಿದನು.

ಭಾಗೋ ನಾಚಿಕೆಯಿಂದ ಮಾತಿಲಿಯಾದನು. ಹಿಂದೆಂದೂ ಕಾಣದ ಧೈರ್ಯದಿಂದ ಅಧಿಕಾರ ದರ್ಪ ಮತ್ತು ಜಾತಿಗಳನ್ನು ಪ್ರಶ್ನಿಸುವಂಥ ಮಾನವ ಗುರುವೊಬ್ಬ ಹುಟ್ಟಿ ಬಂದಿದ್ದಾನೆಂಬ ಸುದ್ದಿ ಕಾಡುಕಿಚ್ಚಿನಂತೆ ಹಳ್ಳಿಗಾಡಿನಲ್ಲಿ ಹರಡಿತು.

ಅಲ್ಲಿಂದ ಗುರು ಹಿಂದುಗಳಿಗೆ ಮಹಾತೀರ್ಥಯಾತ್ರಾ ಕೇಂದ್ರವಾಗಿದ್ದ ಕುರುಕ್ಷೇತ್ರದ ಕಡೆಗೆ ಹೊರಟನು. ಸೂರ್ಯಗ್ರಹಣ ಸಮಯವಾದ್ದರಿಂದ ಅಲ್ಲಿ ದೊಡ್ಡದೊಂದು ಜಾತ್ರೆ ಸೇರಿತ್ತು. ಮೊದಲೇ ಪಾಣಿಪತ್ತವನ್ನು ಸೇರಿ, ಸೂಫಿ ಪಂಗಡದ ಷಾ ಶರಾಫ್ ಎಂಬುವನನ್ನು ಕಂಡು ಮಾತಾಡಿದನು. ಗೃಹಸ್ಥ ಯೋಗ್ಯವಾದ, ಫಕೀರನಿಗೆ ಸಲ್ಲದ ಉಡುಪನ್ನು ಧರಿಸಿದ್ದೇಕೆಂದೂ, ತಲೆಯನ್ನೇಕೆ ಬೋಳಿಸಲಿಲ್ಲವೆಂದೂ ಷಾ ಶರಾಫ್ ಕೂಡಲೆ ಪ್ರಶ್ನಿಸಿದನು. "ಬೋಳಿಸಬೇಕಾದ್ದು ತಲೆಯಲ್ಲ, ಮನಸ್ಸು. ಧೂಳಿನಂತೆ ದೈನ್ಯದಿಂದಿರುವುದೇ ಮನಸ್ಸಿನ ಮುಂಡನಕ್ಕೆ ನಿಜವಾದ ದಾರಿಯಾಗುತ್ತದೆ. ಭೋಗಾಹಂಕಾರಗಳನ್ನು ತ್ಯಜಿಸಿ, ಭಗವಂತನಿಗೆ ತಲೆಯನ್ನರ್ಪಿಸಬೇಕು. ಆಗ ಉಟ್ಟದ್ದೆಲ್ಲ ಪವಿತ್ರವಾಗುತ್ತದೆ" ಎಂದು ನಾನಕ್ ಉತ್ತರಿಸಿದನು. ಮತ್ತೆ ಮಾತು ಮುಂದುವರಿಸಿ "ವಿವೇಕಿಗಳ ಉಪದೇಶಕ್ಕೆ ಮಣಿದು, ಸದಾ ಹೃದಯದಲ್ಲಿ ದೇವರನ್ನು ಪೂಜಿಸುವುದಾದರೆ ಸಾಧುಗಳ ಉಡುಗೆತೊಡುಗೆಗಳನ್ನು ತೊಟ್ಟಂತಾಗುತ್ತದೆ. ಮನಸ್ಸನ್ನು ಸಮಸ್ಥಿತಿಯಲ್ಲಿಟ್ಟುಕೊಂಡು, ಸುಖದುಃಖಗಳ ಫಲವನ್ನು ಸಮತೆಯಿಂದನುಭವಿಸುತ್ತ, ಎಂಥ ಸಂದರ್ಭದಲ್ಲಾದರೂ ಸಮತೂಕ

[1] ಇದಕ್ಕೆ ಸಂಬಂಧಿಸಿದಂತೆ ನಾನಕ್ ಪವಾಡವೊಂದನ್ನು ಮೆರೆದುದಾಗಿ ಹಳೆಯ ಕಡತಗಳಿಂದ ತಿಳಿಯುತ್ತದೆ. ಎರಡು ಮನೆಗಳಿಂದ ಬಂದ ರೊಟ್ಟಿಯನ್ನು ಕೈಗಳಿಂದ ಹಿಂಡಿದಾಗ, ಒಂದರಲ್ಲಿ ರಕ್ತವೂ, ಮತ್ತೊಂದರಲ್ಲಿ ಹಾಲೂ ಸ್ರವಿಸಿತಂತೆ.

ವನ್ನು ಕಳೆದುಕೊಳ್ಳದಿದ್ದರೆ ಸಾಕು, ಅವನು ಧರಿಸುವ ಬಟ್ಟೆ ಎಂಥದ್ದಾದರೇನು ?" ಎಂದು ನುಡಿದನು.

ಅವನ ಜಾತಿ ಕುಲಗಳನ್ನು ಅವರ ಬದುಕಿನ ರೀತಿಯನ್ನು ಕುರಿತು ಪ್ರಶ್ನೆ ಹಾಕಲಾಯಿತು. "ಸತ್ಯವೇ ನನ್ನ ಕುಲ. ಅಗ್ನಿವಾಯುಗಳೇ ನನ್ನ ಗೋತ್ರ. ಮರಮಣ್ಣುಗಳಂತೆ ನಾನು ಬದುಕುತ್ತೇನೆ ; ಕತ್ತರಿಸಲಿ ಅಗೆಯಲಿ, ಅವುಗಳಂತೆ ಸಹಿಸಿಕೊಳ್ಳುತ್ತೇನೆ. ಹೂವೆಸೆಯಲಿ, ಧೂಳಿಸೆಯಲಿ, ನದಿಯಂತೆ ನಾನು ಲಕ್ಷಿಸುವುದಿಲ್ಲ. ಶ್ರೀಗಂಧದಂತೆ ಕಂಪುಸೂಸುವ ಬಾಳೇ ನನ್ನ ಗುರಿ" — ಇದು ನಾನಕ್ ಕೊಟ್ಟ ಉತ್ತರ.

ಅನಂತರ ಫಕೀರ ಎಂತಿರಬೇಕೆಂದು ಯಜಮಾನ ಪ್ರಶ್ನಿಸಿದನು. "ಬದುಕಿಯೂ ಸತ್ತಂತಿರುವ, ಜಾಗ್ರದವಸ್ಥೆಯಲ್ಲಿಯೂ ಸುಷುಪ್ತಿಯಲ್ಲಿರುವ, ಕಂಡೂಕಂಡೂ ಸುಲಿಗೆಗೆ ಶರಣಾಗುವವನೇ ಫಕೀರ. ಸುಖದುಃಖಗಳನ್ನು ಸಮಾನವಾಗಿ ಸ್ವಾಗತಿಸುವ, ಕೋಪ ಸಂಕಟಗಳಿಂದ ದೂರವಾಗಿರುವ, ಲೋಭಾಹಂಕಾರಗಳಿಗೆ ಬಲಿಯಾಗದ, ಭಗವದ್ವಾಣಿ ವಿನಾ ಬೇರಾವುದನ್ನೂ ಕೇಳಿಸಿಕೊಳ್ಳದೆ, ಚರಾಚರವಸ್ತುಗಳಲ್ಲಿ ಹಾಗೂ ಶೂನ್ಯದಲ್ಲಿ ಅವನನ್ನು ಮಾತ್ರ ಕಾಣುತ್ತ, ಚಿತ್ತೈಕಾಗ್ರತೆಯಿಂದ ಧ್ಯಾನಮಗ್ನನಾಗಿರುವವನೇ ಪರಮ ಸಾಧು"

ಷಾ ಶರಾಫ್ ಈ ಉತ್ತರದಿಂದ ಸಂತುಷ್ಟನಾಗಿ, ಅವನ ಚರಣಗಳಿಗೆ ನಮಿಸಿ, ಕೈಗಳಿಗೆ ಮುತ್ತಿಟ್ಟು "ಓ ದೇವಮಾನವ, ಪ್ರಶ್ನೆಗಳ ಸುರಿಮಳೆಯಿಂದ ನಿಮಗೆ ಅತ್ಯಾಚಾರವೆಸಗಿದ್ದೇನೆ. ನಿಮ್ಮ ದರ್ಶನವೇ ನನ್ನ ಪಾಲಿಗೆ ಭಗವದ್ದರ್ಶನವಾಗಿದೆ" ಎಂದು ನುಡಿದನು.

ತಮ್ಮ ಕಾಲದ ಮಡಿವಂತಿಕೆಯ ಮತ್ತು ಸಂಪ್ರದಾಯದ ಜನರಲ್ಲಿ ಆಚರಣೆಯಲ್ಲಿದ್ದ ಮತೀಯ ವಿಧಿಸಂಸ್ಕಾರ ನಿಷಿದ್ಧಕರ್ಮಗಳಲ್ಲಿ ನಾನಕ್‌ಗೆ ನಂಬಿಕೆಯಿರಲಿಲ್ಲ. ಇದಕ್ಕೆ ಭಕ್ತವೃಂದದಲ್ಲಿ ರೂಢಿಯಲ್ಲಿರುವ ಕಥೆ ಐತಿಹ್ಯಗಳೇ ಸಾಕ್ಷಿಯಾಗಿವೆ.

ಕುರುಕ್ಷೇತ್ರದಲ್ಲಿ ಅವನ ಅನುಯಾಯಿಯೊಬ್ಬ ಆಹಾರಕ್ಕಾಗಿ ಜಿಂಕೆ ಮಾಂಸವನ್ನು ನೀಡಿದಂತೆ ಪ್ರತೀತಿಯಿದೆ. ಗುರು ಆಹಾರ ವಿಷಯದಲ್ಲಿ ಭೇದ ವೆಣಿಸುತ್ತಿರಲಿಲ್ಲ. ಭಕ್ತರ ಉಪಚಾರವನ್ನು ನಿರಾಕರಿಸದೆ, ತನಗೆ ಸಮರ್ಪಿತ

ವಾದದ್ದನ್ನು ಸ್ವೀಕರಿಸುತ್ತಿದ್ದನು. ಅದನ್ನು ಹುರಿಯುವಂತೆ ಮರ್ದನನಿಗೆ ಬೆಸಸಿ ದನು. ಮಾಂಸಾಹಾರವನ್ನು ದ್ವೇಷಿಸುತ್ತಿದ್ದ, ಅದರಲ್ಲಿಯೂ ಗ್ರಹಣ ದಿನದಂಥ ಶುಭದಿನಗಳಲ್ಲಿ ಅದನ್ನು ಅಸಹ್ಯಿಸುತ್ತಿದ್ದ ಸ್ಥಳೀಯ ಜನ ಇದನ್ನು ನೋಡಿ ರೇಗಾಡಿದರು. ಈ ದೈವದ್ರೋಹದ ಸಂಗತಿಯನ್ನು ಕೇಳಿದವರೆಲ್ಲ ಕೋಪಾವಿಷ್ಟ ರಾದರು. ಕೆಲವರು ದೊಣ್ಣೆ ಹೊತ್ತುಕೊಂಡು ಅವನ ಕಡೆಗೆ ನುಗ್ಗಿದರು; ಮತ್ತೆ ಕೆಲವರು ಕಲ್ಲಿನಿಂದ ಹೊಡೆದು ಸಾಯಿಸಬೇಕೆಂದು ಧಾವಿಸಿದರು. ತನ್ನೆಡೆಗೆ ನುಗ್ಗಿಬರುತ್ತಿದ್ದ ಕೆರಳಿದ ಮಂದಿಯನ್ನು ಕಂಡು ನಾನಕ್ "ಹುಚ್ಚ ರಂತೆ ನನ್ನ ಕಡೆಗೇಕೆ ನುಗ್ಗಿ ಬರುತ್ತಿದ್ದೀರಿ. ನಿಮಗೆ ನಾನೇನು ತಪ್ಪುಮಾಡಿ ದ್ದೇನೆ?" ಎಂದು ಕೇಳಿದನು. ಅವನ ಸೌಮ್ಯವೂ ಪ್ರಶಾಂತವೂ ಆದ ಮುಖಮುದ್ರೆಯಿಂದ ಸಮಾಧಾನಕರವಾಣಿಯಿಂದ ಮಂದಿ ಮತ್ತಷ್ಟು ಕಳವಳಗೊಂಡಿತು. "ಯಾತ್ರಾಸ್ಥಳದಲ್ಲಿ ಶುಭದಿನದಂದು ಮಾಂಸ ಬೇಯಿಸು ತ್ತಿದ್ದೀಯೆ? ಅದರ ಮೇಲೆ ಏನೂ ನಡೆಯಲಿಲ್ಲವೆಂಬಂತೆ ಮುಗ್ಧತನ ತೋರಿಸುತ್ತಿದ್ದೀಯೆ. ಇದು ಸರಿಯೆ" "ಎಂದೂ ಮಾಂಸವನ್ನೇ ಕಾಣದ ಜನ ಈ ದೃಶ್ಯದಿಂದ ಕಳವಳಗೊಳ್ಳಬೇಕಾಗಿದೆ. ಮಾಂಸದಿಂದಲೇ ಗರ್ಭತಾಳಿರುವ, ತಾನೇ ಎಲುಬು ಮಾಂಸಗಳ ಮುದ್ದೆಯಾಗಿರುವ, ತಾಯಿಯೆದೆಯುಂಡಿರುವ, ಮಾಂಸದ ನಾಲಗೆಯಿಂದ ತಿನ್ನುತ್ತಿರುವ ಬಾಯಿಯೆಲ್ಲ ಮಾಂಸದ ರಚನೆ ಯಾಗಿರುವ, ಮಾಂಸದ ಗಾತ್ರವನ್ನು ಮದುವೆಯಾಗುವ, ಮಾಂಸವನ್ನು ಉತ್ಪತ್ತಿಮಾಡಿ, ಮಾಂಸದಿಂದಲೇ ಬದುಕುತ್ತಿರುವ ಜನ ಇದಕ್ಕೇಕೆ ಮುಖ ಮುರಿಯಬೇಕು? ಮಾಂಸವನ್ನು ಬಿಟ್ಟು ಬಾಳಿದ ಸ್ತ್ರೀಪುರುಷರಿದ್ದಾ ರೆಯೆ?"

ಮನುಷ್ಯ ಮಾಂಸದಲ್ಲಿಯೇ ಹುಟ್ಟಿ ಬೆಳೆದಿದ್ದರೂ ಅದನ್ನು ತಿನ್ನುವುದು ಪಾಪಕರವೆಂದು ಅವನ ನಿಂದಕರು ಹಠಹಿಡಿದರು. "ಜೀವನಕ್ಕೆ ಮೂಲ ಕಾರಣವಾದ ನೀರನ್ನು ನಾವು ಬಳಸುವುದಿಲ್ಲವೆ? ಅದು ಪ್ರಾಣಿ ಸಸ್ಯಗಳಿ ಗೆಂತೊ ಮನುಷ್ಯನಿಗೂ ಅಂತೆಯೆ ಪ್ರಾಣಶಕ್ತಿಯನ್ನು ನೀಡುತ್ತದೆ. ಅದು ಜೀವನಕ್ಕೆ ಕಾರಣಮಾತ್ರವಲ್ಲ, ಜೀವನವೇ ಆಗಿರುವುದರಿಂದ ಅದನ್ನು ನಿರಾಕರಿಸುತ್ತೇವೆಯೆ? ಗಿಡಗಳಿಗೆ ಜೀವವಿಲ್ಲವೆ? ಅವು ಉಸಿರಾಡುತ್ತವೆ, ಪ್ರೀತಿಸುತ್ತವೆ, ಬದುಕುತ್ತವೆ, ಸಾಯುತ್ತವೆ. ಪ್ರಾಣಿಮಾಂಸವನ್ನು ತಿನ್ನುವು

ದಿರಲಿ, ಮನುಷ್ಯರನ್ನೇ ನುಂಗುವ, ಅವರ ರಕ್ತವನ್ನು ಹೀರುವ ಜನರನ್ನು ಏನೆಂದು ಕರೆಯೋಣ?" ಎಂದು ಗುರು ಉತ್ತರಿಸಿದನು.

ಅವನು ಹುಚ್ಚನೆಂದು ತಿಳಿದ ಕೆಲವು ನಿಂದಕರು ಜುಗುಪ್ಸೆಯಿಂದ ಕಾಲ್ತೆಗೆದರು; ಮತ್ತೆ ಕೆಲವು ಸೂಕ್ಷ್ಮಗ್ರಾಹಿಗಳು ಅವನು ಹೇಳಿದುದು ಸತ್ಯ ದೂರವಿರಲಾರದೆಂದು ಮನದಟ್ಟು ಮಾಡಿಕೊಂಡರು. ಅನಂತರ ಮತಾಂತರ ಹೊಂದಿದವರನ್ನು ಸಂಬೋಧಿಸಿ ಗುರು ನುಡಿದನು: "ಓ ಮಾನವರೆ, ಬಾಯಿ ರುಚಿಗಾಗಿ ನಾನು ತಿನ್ನುವುದಿಲ್ಲ. ಬೆವರಿನಿಂದ ಗಳಿಸಿದವ ಶ್ರದ್ಧೆಯಿಂದ ಏನು ಕೊಟ್ಟರೂ ತೆಗೆದುಕೊಳ್ಳುತ್ತೇನೆ. ಈಶ್ವರೇಚ್ಛೆಯಂತೆ ನನಗೇನು ಸಿಗುತ್ತದೊ ಅದನ್ನು ನಿರಾಕರಿಸುವುದು ಅದ್ಧೈವತನವಾಗುತ್ತದೆ."

ಒಮ್ಮೆ ಹರಿದ್ವಾರದಲ್ಲಿದ್ದಾಗ ಜನ ಮೂಡಣ ಕಡೆಗೆ ನೀರೆರಚುವುದನ್ನು ಗಮನಿಸಿದನು. ಅಂಥ ಮಾಡಿತದ ಕಾರಣವೇನೆಂದು ವಿಚಾರಿಸಿದನು. ಸತ್ತು ಸ್ವರ್ಗದಲ್ಲಿದ್ದ ಪೂರ್ವಜರಿಗೆ ಆತ್ಮಶಾಂತಿಗಾಗಿ ತಾವು ಜಲತರ್ಪಣ ನೀಡುತ್ತಿದ್ದುದಾಗಿ ಅವರು ಉತ್ತರಿಸಿದರು. ನಾನಕ್ ಮುಗುಳುನಕ್ಕು, ಒಂದು ಕ್ಷಣವೂ ತಳುವದೆ, ಪಡುವಣ ಕಡೆಗೆ ನೀರೆರಚಲನುವಾದನು. ಅಲ್ಲಿದ್ದ ಶ್ರದ್ಧಾವಂತರು ಅವನ ವಿಚಿತ್ರ ಚೇಷ್ಟೆಯನ್ನು ನೋಡಿ ವಿನೋದಗೊಂಡು, ಅದರ ಕಾರಣವನ್ನು ಕೇಳಿದರು. "ನಾನು ಪಶ್ಚಿಮ ಭಾರತದವನು. ನನ್ನ ಹುಟ್ಟೂರಿನಲ್ಲೊಂದು ಹೊಲಮನೆಯಿದೆ. ನಾನು ಊರು -ಬಿಟ್ಟಂದಿನಿಂದ ಸಾಕಷ್ಟು ಮಳೆ ಆಗಿದೆಯೊ ಇಲ್ಲವೊ ಗೊತ್ತಿಲ್ಲ. ಆದ್ದರಿಂದಲೇ ನಾನು ಇಲ್ಲಿಂದ ನೀರೆರೆಯಲು ಯೋಚಿಸಿದ್ದು." "ನೀನು ಬೆಳೆದವ, ಬುದ್ಧಿ ಬಲಿತವ. ಇಲ್ಲಿಂದ ನೀರೆರಚಿದರೆ ಹೊಲಮನೆ ಮುಟ್ಟಲಾರದೆಂಬ ತಿಳಿವಳಿಕೆ ಬೇಡವೆ?" ಎಂದು ಯಾತ್ರಿಕರು ಅವನ ಪೆದ್ದತನಕ್ಕಾಗಿ ನಕ್ಕರು. "ನೀವು ವಿಚಿತ್ರ ವ್ಯಕ್ತಿಗಳು. ನಿಮ್ಮ ತರ್ಪಣ ಬೇರೆ ಪ್ರಪಂಚವನ್ನು ಮುಟ್ಟಬಹುದಾದರೆ ನನ್ನ ನೀರೆರೆತ ಕೆಲವು ನೂರು ಮೈಲಿಗಳಷ್ಟಾದರೂ ಹೋಗಲಾರವೆ?" ಅವರ ನಂಬಿಕೆಯ ಬುಡವಲುಗಿಸಿದ ಪ್ರಶ್ನೆಗಳಿಂದಾಗಿ, ಅವುಗಳ ಹಿಂದಿದ್ದ ಅಖಂಡನೀಯ ತರ್ಕಕ್ಕಾಗಿ ಪ್ರಶ್ನಕರು ಮಾತಿಲಿಯಾದರು. ನಾನಕ್ ಇಲ್ಲಿ ಅನೇಕರನ್ನು ಮತಾಂತರಗೊಳಿಸಿದನು. "ಹೃದಯ ದೇಗುಲದಲ್ಲಿ ಭಗವಂತನನ್ನಿರಿಸಿಕೊಂಡು ಸದಾ ಒಳ್ಳೆಯದನ್ನು ಮಾಡುವುದಾದರೆ ಅವನ ಆತ್ಮ ಇಲ್ಲಲ್ಲದೆ ಅಲ್ಲಿಯೂ ಪ್ರಶಾಂತ

ವಾಗಿರುತ್ತದೆ. ಭಗವಂತನನ್ನು ತೃಪ್ತಿಪಡಿಸಲು ಅವನು ಬೇರೆ ಯಾವ ವಿಧಿಗಳನ್ನೂ ಆಚರಿಸಬೇಕಾಗಿಲ್ಲ."

ಮತ್ತೊಂದು ಊರಿನಲ್ಲಿ ಅವನು ಮಡಿ ಬ್ರಾಹ್ಮಣನ ಅಡುಗೆದಾಣವನ್ನು ಪ್ರವೇಶಿಸಿದನು. ಬ್ರಾಹ್ಮಣ ಕೋಪಾವಿಷ್ಟನಾಗಿ, ಅಡುಗೆ ಮನೆಯನ್ನು ಅಪವಿತ್ರಗೊಳಿಸಿದ್ದಕ್ಕಾಗಿ ಅವನಿಂದ ವಿವರಣೆ ಕೇಳಿದನು. ಹೀನ ಕುಲದ ಸೋದರ ಮಾನವರ ಮೈಮೇಲಿನ ಗಾಳಿ ಬೀಸಿದ್ದರಿಂದಲೆ ಸುತ್ತಮುತ್ತಣ ಜಾಗ ಹೊಲಸಾಯಿತೆಂದು ದ್ವೇಷ ಸಾಧಿಸುವ ಮನುಷ್ಯನಿಂದ—ಅವನ ಕೋಪದಿಂದ ಅವನ ಅಡುಗೆ ಮನೆ ಮೈಲಿಗೆಯಾಯಿತೆಂದು ಗುರು ನುಡಿದನು. ಇದರಿಂದ ಬ್ರಾಹ್ಮಣ ಮತ್ತಷ್ಟು ಕೋಪಗೊಂಡನು. "ಅಜ್ಞಾನವೇ ಹೀನ ಕುಲದ ಮದ್ದಲಿಗಿತಿ ; ಕ್ರೌರ್ಯವೆ ಕಸಾಯಿತಿ ; ಪಿಸುಣತನವೆ ಜಾಡಮಾಲಿ ; ಲೋಕನಾಶಿಯಾದ ಕೋಪವೆ ಚಂಡಾಲ. ಈ ನಾಲ್ಕು ಹೀನಕುಲಗಳು ತನ್ನ ಅಂತರ್ಯವನ್ನು ಹೊಲಸುಗೊಳಿಸುತ್ತಿರುವಾಗ, ಓ ಬ್ರಾಹ್ಮಣ, ಅಡುಗೆ ಕೋಣೆಯ ಸುತ್ತ ಗೆರೆಯೆಳೆದು, ಪ್ರಯೋಜನವೇನು ? ಸತ್ಯ ಸಂಯಮ ಸಚ್ಚರಿತಗಳು ಗಡಿಗೆರೆಗಳಾಗಬೇಕು, ಭಗವನ್ನಾಮಸ್ಮರಣೆಯೆ ಮಜ್ಜನವಾಗಬೇಕು. ಆಗವನು ದೇವರಿಗೆ ಬೇಕಾದವನಾಗುತ್ತಾನೆ" ಎಂದು ಗುರು ಬೋಧಿಸಿದನು.

ಗುರು ದೆಹಲಿಯಲ್ಲಿದ್ದಾಗ ಚಕ್ರವರ್ತಿಯ ಆನೆ ಸತ್ತುಹೋಯಿತಂತೆ. ಕೆಲಸ ಕಳೆದುಕೊಳ್ಳುವ ಭಯದಿಂದ ಆನೆಗಾಹಿಗಳು ಕಳವಳಗೊಂಡರು. ಆನೆಯನ್ನು ಬದುಕಿಸಿಕೊಡುವಂತೆ ಅವರು ಗುರುವಿನ ಮುಂದೆ ಗೋಳ್ಗರೆದರು. "ಸಾವು ಬದುಕುಗಳು ಭಗವಂತನ ಕೈಯಲ್ಲಿವೆ. ಅವನ ರಹಸ್ಯಾತ್ಮಕ ನಾಟಕವನ್ನು ಯಾರೂ ಭೇದಿಸಲಾರರು. ಅವನಿಂದ ಬಂದದ್ದನ್ನೆಲ್ಲ ತೆಪ್ಪಗೆ ಅನುಭವಿಸುವುದೇ ಮೇಲು. ಜೀವವಿರುವತನಕ ಒಳ್ಳೆಯದಕ್ಕಾಗಿ ದೇವರನ್ನು ಪ್ರಾರ್ಥಿಸಬೇಕು. ಆದರೆ ಕಾಲ ಸನ್ನಿಹಿತವಾದಾಗ ಈಶ್ವರೇಚ್ಛೆಗೆ ಸಂತೋಷದಿಂದ ಶರಣಾಗಬೇಕು" ಎಂದು ಗುರು ಅವರನ್ನು ಸಮಾಧಾನಪಡಿಸಿದನು.

ಗುರು ಬೃಂದಾವನದಲ್ಲಿದ್ದಾಗ ಕೃಷ್ಣಲೀಲಾ ನಾಟಕವನ್ನು ನೋಡಿದನು ; ಆತ್ಮಾರ್ಪಣೆಯ ಪವಿತ್ರ ಭಾವದಿಂದಲ್ಲದೆ ಜೀವನಯಾಪನೆಗಾಗಿ ಜನ ನಾಟಕ ಆಡುತ್ತಿದ್ದರೆಂಬುದನ್ನು ತಿಳಿದಾಗ ತುಂಬ ಖೇದಗೊಂಡನು ; ಕೆಳಕಂಡಂತೆ ಹಾಡಿದನು :

ಗುರು ನರ್ತಿಸೆ ಭಕ್ತರಭಿನಯಿಸುವರು,
ಅವರ ತಲೆಕಾಲು ಚುರುಕು
ಕೂದಲಿಗೆ ತೊಡೆಯುವರು ರಜವ ಮರುಳರೋಲೆ
ಮಂದಿಯನು ನಗಿಸುವುದೆ ಏಕೈಕ ಗುರಿಯವರ!
ಹಸಿವ ತಣಿಸಲು ದಿನವನೆಣಿಸುವರಹುದು
ಗೋಪಿಕೃಷ್ಣರಿಗಾಗಿ, ರಾಮಜಾನಕಿಗಾಗಿ
ಎನಿತೆನಿತೊ ಸಂಭ್ರಮಂ
ಭಗವತ್ಕೃಪಾ ಪಾತ್ರನಾವನೊ ಅವನೆ ನಿಜಕು ಸಾಧಕನ್ ;
ಮಂಜು ಹೊತ್ತರೆ ಕಾತರದ ಮನಸಿನಲಿ ಮೈದೋರುವುದು
ಅರಿವುಳ್ಳವರ ತಿಳಿವಿನಲಿ ನೆಲೆನಿಲ್ಲುವುದು.
ಇಲ್ಲದಿರೆ ; ಎಣ್ಣೆಗಾಣಗಳು ನೇಯ್ಗೆ ಮಗ್ಗಗಳು
ಕುಂಬರನ ಚಕ್ರ ನಾಟಿ ಮಿಲ್ಲುಗಳು
ಮರುಧರೆಯ ಮೇಣ್ ಪರ್ವತಾಗ್ರದ ಸುಟ್ಟುರೆಯು
ಕಡೆಗೋಲು ರೋಣುಗಲ್ಲುಗಳು
ಗೊತ್ತುಗುರಿಯಿಲ್ಲದಿಹ ಹಕ್ಕಿ ಹಾರಾಟವೆಲ್ಲವೂ
'ಭಕ್ತ' ಬಿರುದಿಗೆ ಅರ್ಜಿ ತಗುಲಿಸಬಹುದು.
ಚಾಳಿಗಾಳಾಗಿ ಕುಣಿವವರ ಮೇಣ್ ಎಡವುವರ
ಸಂಖ್ಯೆ ಎಣಿಕೆಗಸದಳವಹುದು.
ಅಂತೆ ಕುಣಿವವರ ಬಗೆಗೆ ಬಪ್ಪುದು ಹುರುಪು ; ಕೊನೆಗೆ ಗೋಳೇ ಶರಣು.

ಆ ಕತದಿ, ಓ ನಾನಕ್, ದೇವಗಂಜುವನೆ ನಿಜಕು ಶರಣ.

೩

ಸತ್ಯವೇ ಸರ್ವಸ್ವ
ಮಿಗಿಲೆಲ್ಲಕಿಂ ಸತ್ಯಜೀವನಂ

—ಗುರು ನಾನಕ್

ಆನಂತರ ಗುರು ಪೂರ್ವಾಭಿಮುಖವಾಗಿ ಪ್ರಯಾಣ ಬೆಳೆಸಿದನು. ಈಗವನ ಉಡುಪು ವಿಚಿತ್ರವಾದ ಬೆರಕೆಯಾಗಿತ್ತು. ಮಾವಿನ ಬಣ್ಣದ ಜಾಕೀಟು; ಅದರ ಮೇಲೆ ಬಿಳಿಯ ವಲ್ಲಿ; ತಲೆಗೆ ಮುಸ್ಲಿಂ ವಿರಕ್ತ ಧರಿಸುವ ಟೋಪಿ; ಕೊರಳಿಗೆ ಎಲುಬು ಹಾರ; ಹಣೆಗೆ ಹಿಂದೂ ಸಾಧಕನ ಕುಂಕುಮದ ಬೊಟ್ಟು. ಹಿಂದೂ-ಮುಸ್ಲಿಂ ವಸ್ತ್ರರೀತಿಗಳ ಸಂಗಮವನ್ನಿಲ್ಲಿ ಕಾಣಬಹುದಿತ್ತು. ಈ ಹಿಂದೆ ಯಾರೂ ಅಂಥ ಉಡುಪನ್ನು ಧರಿಸಿರಲಿಲ್ಲ.

ದಾರಿಯಲ್ಲಿ ಗುರುವಿಗಡ್ಡಲಾಗಿ ಶೇಕ್‌ವಾಜಿದ್ ಎಂಬ ಮುಸ್ಲಿಂ ಗಣ್ಯ ವ್ಯಕ್ತಿಯೊಬ್ಬ ಪಲ್ಲಕ್ಕಿಯಿಂದಿಳಿದನು. ಒಡನೆಯೆ ಬೋಯಿಗಳು ಅವನಿಗೆ ಗಾಳಿ ಬೀಸತೊಡಗಿದರು; ಮತ್ತಿಬ್ಬರು ಸೇವಕರು ಅವನ ಆಯಾಸ ಪರಿಹಾರ ಕ್ಕಾಗಿ ಮೈಯೊತ್ತಲನುವಾದರು. ಇದನ್ನು ನೋಡಿ ವಿಹ್ವಲಗೊಂಡ ಮರ್ದನ ಗುರುವನ್ನು ಸಂಬೋಧಿಸಿ "ಓ ದೇವರೇ, ಈ ಜಗತ್ತಿನಲ್ಲಿ ನ್ಯಾಯಕ್ಕೆ ಬೆಲೆ ಯಿಲ್ಲವೆ? ಪಲ್ಲಕ್ಕಿಯಲ್ಲಿ ಕುಳಿತು ಬಂದವನ ಆಯಾಸವನ್ನು ಹೊತ್ತು ತಂದ ವರು ಪರಿಹರಿಸಬೇಕಾಗಿದೆಯಲ್ಲ, ಇದು ಧರ್ಮವೆ?" ಎಂದು ಪ್ರಶ್ನಿಸಿದನು.

"ಮರ್ದನ ಇದೆಲ್ಲ ಅವರವರ ಕರ್ಮದ ಫಲ. ಮಾನವ ಜನ್ಮವನ್ನು ಅನುಗ್ರಹಿ ಸಿದಾಗಲೆ, ಈಶ್ವರ ಸರ್ವರಿಗೂ ಸಮಾನಾವಕಾಶವನ್ನು ಕರುಣಿಸುತ್ತಾನೆ. ಆ ಅವಕಾಶವನ್ನು ಸದುಪಯೋಗಪಡಿಸಿಕೊಂಡು ತನ್ನ ಭವಿಷ್ಯವನ್ನು ರೂಪಿಸಿ ಕೊಳ್ಳಬೇಕು. ಕೆಲವರು ಅವಕಾಶವನ್ನು ಸರಿಯಾಗಿ ಬಳಸಿಕೊಳ್ಳುತ್ತಾರೆ; ಇತರರು ಇಲ್ಲ. ಇಂತೆಯೇ ಕೆಲವರು ಜಗತ್ತಿನಲ್ಲಿ ಸುಖಸಂತೋಷಗಳನ್ನನು ಭವಿಸುತ್ತಾರೆ; ಇತರರು ದುಃಖವನ್ನನುಭವಿಸುತ್ತಾರೆ. ಆದರೆ ಪ್ರಾಪಂಚಿಕ ಸುಖ ಸಂತೋಷಗಳು ಆಧ್ಯಾತ್ಮಿಕ ತೃಪ್ತಿಗಾಗಲಿ ಸಂತೃಪ್ತ ಜೀವನಕ್ಕಾಗಲಿ

ಸಾಧನವೆಂದು ತಪ್ಪು ತಿಳಿದುಕೊಳ್ಳಬಾರದು. ಕೊನೆಯ ನಿರ್ಣಯದ ಪ್ರಕಾರ ನಿಜವಾದ ಸುಖ ಮತ್ತು ಆಂತರಿಕ ಪರಿಪೂರ್ಣತೆಗಳಿಗೆ ಆಧ್ಯಾತ್ಮಿಕ ಸಿದ್ಧಿಯೇ ಕಾರಣ. ಇಂದು ಸುಖಿಯಾಗಿರುವಾತ ನಾಳೆ ಅಸುಖಿಯಾಗಬಹುದು. ಆದರೆ ಆಧ್ಯಾತ್ಮಿಕವಾಗಿ ಜಾಗೃತಗೊಂಡ ಮತ್ತು ಏಕಾಖಂಡತೆಯನ್ನು ಸಾಧಿಸಿದ ಚೇತನ ಸದಾ ಆನಂದಮಯಿಯಾಗಿ ಸಮತೂಕವಾಗಿರುತ್ತದೆ."

ಅಲ್ಲಿಂದ ಗುರು ಪಿಲಿಭಿತ್ ಕಡೆ ಮುಖವಾಗಿ ಯೋಗಿಗಳ ಬೃಹತ್ ಕೇಂದ್ರವಾದ ಗೋರಖ ಮಠವನ್ನು ತಲುಪಿದನು. ವಯಸ್ಸು ಕಾರಣವಾಗಿ ಬಹು ಹಿಂದೆಯೇ ಒಣಗಿಹೋಗಿದ್ದ ಅರಳಿ ಮರದಡಿ ಅವನು ಕುಳಿತನು. ಬಲುಬೇಗನೆ ಆ ಮರ ಹಸುರಾದುದನ್ನು ಕಂಡ ಸುತ್ತುಮುತ್ತಣ ಜನ ಆಶ್ಚರ್ಯಚಕಿತರಾದರಂತೆ. ಅಲ್ಲಿಯ ಸಿದ್ಧರು ನಾನಕನನ್ನು ಧಾರ್ಮಿಕ ಚರ್ಚೆಗೆಳೆದು, ಅವನ ಗೊತ್ತುಗುರಿಗಳನ್ನೂ, ಗುರು ವಿವರವನ್ನೂ ವಿಚಾರಿಸಿದರು. ರಿಬೆಕ್ ಬಾರಿಸುವಂತೆ ಮರ್ದನನಿಗೆ ಹೇಳಿ ಗುರು ಮುಂದಿನ ಸ್ತೋತ್ರಗೀತೆಯನ್ನು ಹಾಡಿದನು:

> ನಿನ್ನನ್ನಳೆವ ಗಜಗಡ್ಡಿ ತೂಕಾಳು ತಕ್ಕಡಿಗಳುಂಟೆ ಓ ದೇವ ?
> ನಿನಗೆ ಬೆಲೆ ಕಟ್ಟಲಿಹ ಬೆಲೆಗಾರನಾರು ? ಅರಿವು ತುಂಬುವರಾರು ?
> ನಿನ್ನ ಮೇರೆಯು ಕಾಣೆ, ಓ ಎನ್ನ ಪ್ರೇಮನಿಧಿ,
> ಮಣ್ಣು ನೀರ್ಗಳಲಿ ಪಾತಾಳ ಸ್ವರ್ಗದಲಿ ನೀನೆ; ಸಕಲ ವಿದ್ಯೆಯು
> ನೀನೆಯಾಗಿರುವೆ.

ಹಾಗಾದರೆ ಭಗವಂತನನ್ನರಿಯುವ, ಕಾಣುವ, ಮತ್ತು ಸಾಕ್ಷಾತ್ಕರಿಸಿಕೊಳ್ಳುವ ಬಗೆ ಹೇಗೆ ಎಂದು ಕೇಳಿದ ಶಿಷ್ಯನಿಗೆ ಗುರು ನೀಡಿದ ಉತ್ತರವಿದು :

> ಮನವೆ ಗಜಗಡ್ಡಿ, ಗ್ರಹಿಕೆಯೇ ತೂಕ, ಅವನ ಸೇವೆಯೇ ತೂಕಿಗನ್.
> ಎದೆಯೊಳಗೆ ತೂಗುವುದು, ಕಾಣುವುದು, ನಿಲಿಸಿಕೊಳ್ಳುವುದವನ.
> ಅಲ್ಲಲ್ಲು ; ಅವನೆ ತಕ್ಕಡಿ, ಜಿಹ್ವೆ ; ತೂಕ ಮೇಣ್ ತೂಕಿಗನ್.
> ತನ್ನಂತಾನೆ ನೋಳ್ಪನು, ಅರಿಯುವನು ; ತನ್ನೊಡನೆ ತಾನೆ
> ವ್ಯವಹರಿಪನವನು

ಕುರುಡರಿಗೆ ಹೀನರಿಗೆ ದೈವಪಥ ವಿಮುಖರಿಗೆ
ಚಿತ್ತಚಪಲರಿಗೆಂತು ತಿಳಿಯುವುದು ವಿಶ್ವಮೂರ್ತಿಯ ನಿಲವು ನೆಲೆ ?

ಅವನ ಹೇಳಿಕೆ ನಿಜವಾದದ್ದೆಂದು ಯೋಗಿಗಳು ನುಡಿದರು. ಆದರೆ ತಮ್ಮ ಮಾರ್ಗದಿಂದ ಮಾತ್ರ ಸಾಕ್ಷಾತ್ಕಾರ ಸಾಧ್ಯವೆಂದು ಘೋಷಿಸಿದರು. ಬದುಕಿನ ಬಲೆಯಿಂದ ಬಿಡುಗಡೆ ಹೊಂದಿ, ಆನಂದಮಯವಾದ ನಿರ್ವಿಕಲ್ಪ ಸಮಾಧಿಯನ್ನು ಪಡೆಯಬೇಕಾದರೆ ತಮ್ಮ ಉಡುಪನ್ನುಟ್ಟು, ತಮ್ಮ ಶಿಸ್ತನ್ನು ಪರಿಪಾಲಿಸುವುದೊಳ್ಳೆಯದೆಂದು ಬೋಧಿಸಿದರು. ಅವರಿಗುತ್ತರವಾಗಿ ಗುರುವಾಣಿ ನುಡಿಯಿತು:

"ಯೋಗ ತೇಪೆ ಕಾವಿಯಲ್ಲಿಲ್ಲ, ಯೋಗದಂಡದಲ್ಲಿಲ್ಲ, ವೈಬೂದಿ
ಬಳಿತದಲ್ಲಿಲ್ಲ; ಕಿವಿಯುಂಗುರ ಬೋಳಿಸಿದ ಮುಂಡೆಯಲ್ಲಿಲ್ಲ;
ಕೊಂಬೂದಿಕೆಯಲಿಲ್ಲ.
"ಲೋಕದ ಪಾಪ ಕೊಳಕುಗಳ ನಡುವಿದ್ದೂ ದೋಷಮುಕ್ತನಾಗಿ
ನಿರ್ಲಿಪ್ತನಾಗಿರುವ ಅವನೊಬ್ಬನಿಗೇ ಗೊತ್ತು ಆ ರಹಸ್ಯ.
"ಯೋಗ ಶಬ್ದದಲಿಲ್ಲ; ಎಲ್ಲರನ್ನು ಸಮಾನವಾಗಿ ಕಾಣುವವನೇ
ಯೋಗಿ

ಬದುಕಿನಲಿ ತನ್ನನ್ನು ತಾನೆ ಇಲ್ಲಗೈದವನು
ಹೊಚ್ಚ ಹೊಸಮಟ್ಟುಗಳನಾಲಿಸುವವನೂ, ಭೀತಿರಹಿತನೂ
ಸಂದೇಹದೂರನೂ, ಬಾಹ್ಯಶೂನ್ಯನೂ ಯಾವಾತನೊ
ಅವನ ಚಿತ್ತದೊಳು ಸಮದರ್ಶನದ ಜೇನ್ಮಳೆ ಕರೆಯುವುದು, ಸಮತೆಯ
ಗೀತ ಹನಿಯುವುದು. ತನ್ನನು ತಾನೆ ನೋಡುವನಾತನಾಗ.

ಯೋಗಿಗಳು ಸಂಪೂರ್ಣವಾಗಿ ಪರಿವರ್ತನಗೊಂಡು ಗುರುವಿಗೆ ಗೌರವ ಸಲ್ಲಿಸಿದರು. ಅಲ್ಲಿಂದ ನಾನಕ್ ಮತ್ತು ಅವನ ಚಾರಣ ಮರ್ದನ ಹಿಂದೂಗಳ ಪವಿತ್ರತಮ ಯಾತ್ರಾ ಕೇಂದ್ರವಾದ ವಾರಣಾಸಿಗೆ ತೆರಳಿದರು. ಅದು ಕಬೀರ್ ಮತ್ತು ರವಿದಾಸರೆಂಬ ಇಬ್ಬರು ಮಹಾಸಂತರ ಜನ್ಮಸ್ಥಳ; ಸಂಸ್ಕೃತ ಪಾಂಡಿತ್ಯದ ಮಹಾಕೇಂದ್ರ; ಅಲ್ಲಿ ಚತುರ್ದಾಸನೆಂಬ ಮಹಾವಿದ್ವಾಂಸ

ನಿದ್ದನು. ಪವಿತ್ರ ಸ್ನಾನಕ್ಕಾಗಿ ಗಂಗಾನದಿಗೆ ಹೋಗುತ್ತಿದ್ದಾಗ ಅವನು ಗುರುವಿನ ವಿಚಿತ್ರವಾದ ಉಡುಪನ್ನು ಕಂಡು ಅಣಕವಾಡಿದನು: "ನೀನೆಂಥ ಸಾಧು? ನಿನ್ನ ಕೊರಳಲ್ಲಿ ತುಲಸಿಮಾಲೆಯೂ ಇಲ್ಲ; ಕೈಯಲ್ಲಿ ಜಪಸರವೂ ಇಲ್ಲ; ವಿಷ್ಣು ಸಂಕೇತವಾದ ಸಾಲಿಗ್ರಾಮವೂ ಇಲ್ಲ. ನಿನಗೆಂತು ಮುಕ್ತಿ ಲಭಿಸುತ್ತದೆ?"

"ಬಂಜರು ಭೂಮಿಗೆ ನೀರು ಹಾಕುವವನು ತನ್ನ ಬದುಕನ್ನು ಪೋಲು ಮಾಡಿಕೊಳ್ಳುತ್ತಾನೆ. ಓ ಬ್ರಾಹ್ಮಣ, ದೇವರು ನಿನ್ನ ಪೂಜಾ ವಸ್ತುವಾಗಲಿ, ಸಚ್ಚರಿತ್ರ ತುಲಸಿಹಾರವಾಗಲಿ, ಅವನ ಅನುಗ್ರಹಕ್ಕಾಗಿ ಚಿತ್ತ ಧ್ಯಾನಮಗ್ನ ವಾಗಲಿ, ಭಗವನ್ನಾಮಸ್ಮರಣೆಯ ದೋಣಿಯಲ್ಲಿ ಭವಸಾಗರವನ್ನು ಸುಲಭ ವಾಗಿ ದಾಟುತ್ತೀಯೆ."

"ತೋಟದ ಮಾಲೀಕನ ಶರಣನಾಗಬಯಸುವವನಿಗೆ ಅವನ ಕರ್ಮಗಳೆ ಬಾವಿಯಾಗುತ್ತವೆ, ಗಡಿಗೆಗಳೆ ಹಾರವಾಗುತ್ತವೆ; ಚಿತ್ತವೆ ನೊಗದ ಎತ್ತಾಗಿ ಬಾವಿಯಿಂದ ನೀರೆಳೆದು, ಭಕ್ತಿಯ ಸುಧೆಯಿಂದ ಹೊಲಮನೆಯನ್ನು ಸಾಗು ಮಾಡಿ, ಸಂತೃಪ್ತನಾಗುತ್ತಾನೆ" ಎಂದು ಗುರು ಉತ್ತರಿಸಿದನು.

"ನೀನು ಹೇಳುವುದು ನಿಜ. ಆದರೆ ಕೋಪ ಮೋಹಗಳಿಂದ ತುಂಬಿರುವ ಚಿತ್ತವನ್ನು ಗೆಲ್ಲುವುದು ಹೇಗೆ?" ಎಂದು ಬ್ರಾಹ್ಮಣ ಕೇಳಿದನು. "ಅವು ಶಕ್ತಿಪುಂಜಗಳು. ಅವನ್ನು ಹದಗೊಳಿಸಿ ಗುಳಮಾಡಿಕೊಳ್ಳಬಹುದು. ಅವು ಮನುಷ್ಯನ ಮೇಲೆ ಸವಾರಿಮಾಡುವ ಬದಲು, ಮನುಷ್ಯ ಅವುಗಳ ಮೇಲೆ ಸವಾರಿಮಾಡಬೇಕು."

"ಬ್ರಾಹ್ಮಣ ತನ್ನ ಪ್ರಶ್ನಮಾಲೆಯನ್ನು ಮುಂದುವರಿಸಿದನು: "ಕೊಕ್ಕರೆ ಯನ್ನು ಹಂಸವನ್ನಾಗಿ ಪರಿವರ್ತಿಸಲು ಸಾಧ್ಯವೆ? ಪ್ರಾರಬ್ಧಕರ್ಮದ ಬ್ರಹ್ಮ ಲಿಖಿತವನ್ನು ಮನುಷ್ಯ ಹೇಗೆ ಬದಲಿಸಿಯಾನು?" ಭಗವಂತನ ಅನುಗ್ರಹ ಪೊಂದಿದ್ದರೆ ಪ್ರಾರಬ್ಧಕರ್ಮ ಸಂಪೂರ್ಣವಾಗಿ ಲಯ ಹೊಂದುತ್ತದೆ. ಈಶ್ವರೇಚ್ಛೆಗೆ ದೈನ್ಯದಿಂದ ಮಣಿಯುವ ಶರಣನಿಗೆ ದೈವಾನುಗ್ರಹ ತಾನಾಗಿಯೆ ಒದಗುತ್ತದೆ."

ಪಂಡಿತನ ಮತ್ತೊಂದು ಪ್ರಶ್ನೆ. "ಕಲಿಯದೆ ಜ್ಞಾನವೊದಗುತ್ತದೆಯೆ?" "ಜ್ಞಾನ ಅನುಭವವಾಗುವುದಿಲ್ಲ; ಬುದ್ಧಿ ಯಾವಾಗಲೂ ವಿವೇಕಕ್ಕೆ ದಾರಿ

ಯಾಗುವುದಿಲ್ಲ. ಪ್ರೀತಿತುಂಬ ದುರ್ಬಲವಾಗಿ, ಹೃದಯ ಎಳತಾದದ್ದರಿಂದ ಕೆಡುಕನ್ನೆದುರಿಸಲಾಗದು. ಆದ್ದರಿಂದಲೇ ಮನುಷ್ಯ ಆಸೆ-ಬಯಕೆಗಳೆಂಬ ಇಬ್ಬರು ತಾಯಂದಿರನ್ನು, ಮೋಹಮಾತ್ಸರ್ಯಗಳೆಂಬ ತಂದೆಯರನ್ನೂ ಸಂಪಾದಿಸುತ್ತಾನೆ."

"ಹಾಗಾದರೆ ಮನುಷ್ಯನಿಗೆ ಮುಕ್ತಿ ದೊರಕುವಂತೆಯೇ ಇಲ್ಲ?" ಎಂದು ಚತುರ್ದಾಸ ಪ್ರಶ್ನಿಸಿದನು. "ಗಿಡಮರಗಳು ಹಸುರಾಗಿದ್ದಾಗಲೂ ಅವುಗಳ ಗರ್ಭದಲ್ಲಿ ಅಗ್ನಿಯಿದೆಯೆಂಬುದನ್ನು ನೀನು ಬಲ್ಲೆಯಲ್ಲವೆ? ಸಮುದ್ರ ಭೂಮಿಯನ್ನು ಸುತ್ತುವರಿದಿದೆ. ಆದರೆ ಭೂಮಿ ಕೊಚ್ಚಿಹೋಗಿಲ್ಲ. ಒಂದೇ ಆಕಾಶದಲ್ಲಿ ಸೂರ್ಯಚಂದ್ರರು ನೆಲಸಿದ್ದಾರೆ. ಆದರೆ ಒಂದು ಮತ್ತೊಂದರ ಗುಣವನ್ನು ಒಳಗೊಂಡಿಲ್ಲ" ಎಂದು ಗುರು ಉತ್ತರಿಸಿದನು. "ಹಾಗಾದರೆ ಭಕ್ತನ ಲಕ್ಷಣಗಳೇನು ?" "ಭಗವಂತ ಸರ್ವಾಂತರ್ಯಾಮಿಯೆಂದು ತಿಳಿದು, ಸುತ್ತ ಮುಸುಕಿರುವ ಮಾಯೆಯನ್ನು ಕಿತ್ತೊಗೆಯುವುದು. ಸದಾ ಹೃದಯ ಅನುಕಂಪೆಯಿಂದ ತುಂಬಿರುವುದೇ ಭಕ್ತನ ಹಿರಿಯ ಲಕ್ಷಣ."

ಪರಮಾತ್ಮನ ಸಾಕ್ಷಾತ್ಕಾರಕ್ಕೆ ತನ್ನ ಪಾಂಡಿತ್ಯ ನೆರವಾಗುತ್ತದೆಯೇ ಎಂದು ಪಂಡಿತ ವಿಚಾರಿಸಿದನು. ಜ್ಞಾನ ಹಾಗೂ ಪರಮಾತ್ಮನ ಸ್ವರೂಪ ವನ್ನು ಕುರಿತ ಹಲವು ಗೀತೆಗಳನ್ನು ಗುರು ಹಾಡಿದನು. ದೇವತೆಗಳು, ದೇವ ದೂತರು, ಚಿತ್ತ, ವಿವೇಕ, ವಿಶ್ವ, ಮಾನವ, ಒಳ್ಳೆಯದು, ಕೆಟ್ಟದ್ದು— ಯಾವುದೆ ಆಗಲಿ, ಎಲ್ಲಕ್ಕೂ ಪರಮಾತ್ಮನೇ ಮೂಲವೆಂಬ ತನ್ನ ನಂಬಿಕೆ ಯನ್ನು ಮತ್ತೆ ಒತ್ತಿ ಹೇಳಿದನು. "ಆದ್ದರಿಂದ ಇತರ ವಿಚಾರಗಳಲ್ಲಿ ತೊಡಗಿ ಕೊಳ್ಳದೆ, ಭಗವಂತನ ನಾಮಾಕ್ಷರಗಳನ್ನು ಬರೆಯುತ್ತ ಅವನ ನಾಮಸ್ಮರಣೆ ಯಲ್ಲಿಯೇ ನಿರತನಾಗಿರಬೇಕು." ಭಗವಂತನ ಸಾಕ್ಷಾತ್ಕಾರ ವಿಧಾನವನ್ನು ಕುರಿತು ಪ್ರಶ್ನಿಸಲಾಗಿ ಗುರು ಹೀಗೆ ಉತ್ತರಿಸಿದನು: "ಪ್ರೇಮದ ಮೂಲಕ ಭಗವದ್ಭಕ್ತರಿಗೆ ಮಾನವರೆಲ್ಲ ಸರಿಸಮನಾಗಿ ಕಾಣುತ್ತಾರೆ. ಅವರಲ್ಲಿ ಭೇದ ಭಾವಕ್ಕೆಡೆಯಿಲ್ಲ; ಅಖಿಳ ಜೀವಾವಳಿಯಲ್ಲಿ ಅವರಿಗೆ ಮರುಕವಿದೆ. ಮಾಯೆ ಅವರನ್ನು ಭ್ರಮೆಗೊಳಿಸಲಾರದು. ತನ್ನನ್ನು ತಾನು ಕಂಡುಕೊಳ್ಳುವುದೇ ಅವನಿಗೆ ತೃಪ್ತಿ." ಪಂಡಿತ ಗುರುವಾಣಿಗೆ ಮಾರುಹೋಗಿ ಅವನ ಶಿಷ್ಯ ನಾದನು.

ಅನಂತರ ಗುರು ಗಯೆಯ ಕಡೆ ಯಾತ್ರೆ ಮುಂದುವರಿಸಿದನು. ಅದು ಗೌತಮಬುದ್ಧನ ತಪೋಮಹಿಮೆಯಿಂದ ಪುನೀತವಾಗಿದ್ದ ಪವಿತ್ರ ಕ್ಷೇತ್ರ. ಇತ್ತೀಚೆಗೆ ಅದು ಬ್ರಾಹ್ಮಣರ ಯಾತ್ರಾಸ್ಥಳವಾಗಿತ್ತು. ಸತ್ತ ಪೂರ್ವಿಕರ ಆತ್ಮಶಾಂತಿಗಾಗಿ ತರ್ಪಣ ಬಿಡುವಂತೆ ಬ್ರಾಹ್ಮಣರು ನಾನಕನಿಗೆ ಹೇಳಿದರು. ಅವರ ಮಾತಿಗೆ ಗುರು ನೀಡಿದ ಉತ್ತರವಿದು :

"ಭಗವಂತನ ಹೆಸರೇ ಹಣತೆ ; ದುಃಖವೇ ತೈಲ ; ದೀಪ ಉರಿಸಿದಷ್ಟು ದುಃಖಗಳು ಸುಟ್ಟುಹೋಗುತ್ತವೆ. ಅವು ದಹಿಸಿದ ನಂತರ ನನಗೆ ಸಾವಿನ ಸಂಕಟವಿಲ್ಲ.

"ಭಗವನ್ನಾಮವೆ ಅನ್ನದುಂಡೆ, ಎಲೆ ಬೋಗುಣಿ, ಪ್ರೇತಸಂಸ್ಕಾರ, ಪವಿತ್ರ ತೀರ್ಥ ಮತ್ತು ಶುಚಿಸ್ನಾನ. ಮಂದಿ ದೇವರಿಗೆ ನೈವೇದ್ಯವನ್ನರ್ಪಿಸುತ್ತಾರೆ, ಬ್ರಾಹ್ಮಣರು ಅದನ್ನು ತಿಂದುಹಾಕುತ್ತಾರೆ. ಇದಕ್ಕೆ ಬದಲಾಗಿ, ಇಲ್ಲಿ ಮಾತ್ರವಲ್ಲ ಅಲ್ಲಿಯೂ ತನ್ನ ಆತ್ಮಕ್ಕೆ ಶಾಂತಿ ದೊರೆಯಲೆಂದು ಮನುಷ್ಯ ದೇವರಲ್ಲಿ ಮೊರೆಯಿಡಬೇಕು. ಅವನ ಪ್ರೇಮಕ್ಕೆ ಮಿಗಿಲಾದ ವಸ್ತು ಬೇರೊಂದಿಲ್ಲ."

ಅವರು ಪ್ರಯಾಣ ಮುಂದುವರಿಸಿ, ಮಾರ್ಗಮಧ್ಯದ ಪಟ್ಟಣದಲ್ಲಿ ಅತ್ಯಂತ ವೈಭವದಿಂದ ನಡೆಯುತ್ತಿದ್ದ ಉತ್ಸವವೊಂದನ್ನು ಕಂಡರು. ಆ ಊರಿನ ಸಾಹುಕಾರ ವರ್ತಕನ ಮನೆಯಲ್ಲಿ ಮಗುವಿನ ಹುಟ್ಟುಹಬ್ಬ ಅದ್ದೂರಿಯಿಂದ ನಡೆದಿತ್ತು. ಮಾರನೆಯ ಬೆಳಗ್ಗೆ ಆ ಮಗು ಸತ್ತು ಹೋಯಿತು. ಮನೆ ಗೋಳಾಟ ಚೀರಾಟಗಳ ಬೀಡಾಯಿತು. "ಓ ಎನ್ನೊಡೆಯ, ಸರದಿಯ ಮೇಲೆ ಬರುತ್ತಿರುವ ಸುಖದುಃಖಗಳಿಂದ ಮನುಷ್ಯ ಸಂಕಟಪಡುವುದೇಕೆ ? ಸಾಯುವುದಕ್ಕಾಗಿಯೇ ಹುಟ್ಟುತ್ತಿರುವ ಈ ಪ್ರಪಂಚದಲ್ಲಿ ಶಾಂತಿ ಸಿಗುವುದಾದರೂ ಹೇಗೆ ?" ಎಂದು ಮರ್ದನ ಗುರುವನ್ನು ಪ್ರಶ್ನಿಸಿದನು. "ತಿಳಿವಳಿಕೆಯಿಲ್ಲದ ಮನುಷ್ಯ ಸದಾ ಭೋಗಮಗ್ನನಾಗಿರುತ್ತಾನೆ. ಭೋಗ ಮುಗಿದನಂತರ ಸಂಕಟಕ್ಕೀಡಾಗುತ್ತಾನೆ. ಅವಿನಾಶಿಯಾದ ಭಗವಂತನನ್ನು ಕುರಿತು ಧ್ಯಾನಾಸಕ್ತನಾಗಿ ಸುಖದುಃಖಗಳೆರಡೂ ಭಗವಂತನ ಅನುಗ್ರಹವೆಂದು ತಿಳಿದಿರುವ ಮನುಷ್ಯ ಸಮಚಿತ್ತನಾಗಿದ್ದು ದುಃಖಾತೀತನಾಗಿರುತ್ತಾನೆ." ಗುರು ಮಾತು ತಡೆದು, ಬಾಲ್ಯ ಯೌವನ ಮತ್ತು ಮುಪ್ಪು

ಸಾವುಗಳುಳ್ಳ ಮಾನವ ಜೀವನದ ನಾಲ್ಕು ಹಂತಗಳನ್ನು ಕುರಿತ ಸ್ತೋತ್ರ ವೊಂದನ್ನು ಹಾಡಿದನು. ಆ ಹಂತಗಳನ್ನು ರಾತ್ರಿಯ ನಾಲ್ಕು ಪಾದಗಳಿಗೆ ಹೋಲಿಸಿ, ಮನುಷ್ಯ ನಿದ್ದೆಯಲ್ಲಿದ್ದಂತೆ ಮೈಮರೆಯುತ್ತಾನೆಂದೂ, ಎಚ್ಚರ ಗೊಂಡಾಗ ಕಾಲ ಮೀರಿದ್ದರಿಂದ ಪಶ್ಚಾತ್ತಾಪಪಡಬೇಕಾಗುತ್ತದೆಂದೂ ಹಾಡಿನ ಮೂಲಕ ವಿವರಿಸಿದನು.

ದಾರಿಯ ಊರೊಂದರಲ್ಲಿ ಗುರು ತಂಗಿದಾಗ, ಭಕ್ತನೊಬ್ಬ ತಪ್ಪದೆ ಅವನಲ್ಲಿಗೆ ಬರುತ್ತಿದ್ದನು. ಅವನಂತೆ ಮತ್ತೊಬ್ಬನೂ ಗುರುವಿನ ಬಳಿ ಬರು ತ್ತಿದ್ದನು. ಆದರೆ ಅವನು ಕೆಟ್ಟ ಚಾಳಿಯ ಹೆಂಗಸಿನ ಸಂಗಕ್ಕೆ ಬಿದ್ದು, ಗುರೂಪ ದೇಶವನ್ನು ನಿರ್ಲಕ್ಷಿಸಿ, ಭೋಗಮಗ್ನನಾಗಿದ್ದನು. ಆಮೇಲೆ ಒಂದಾನೊಂದು ದಿನ ತನ್ನ ಪ್ರೇಯಸಿಯ ಮನೆಗೆ ಹೋಗುತ್ತಿದ್ದ ಮನುಷ್ಯನಿಗೆ ದಾರಿಯಲ್ಲಿ ಚಿನ್ನದ ಹಣವಿದ್ದ ಗಡಿಗೆ ದೊರೆಯಿತು. ಅದೇ ಸಮಯಕ್ಕೆ ಗುರುವಿನ ಭಕ್ತನ ಪಾದಕ್ಕೆ ನಂಜಿನ ಮುಳ್ಳೊಂದು ಚುಚ್ಚಿಕೊಂಡಿತು. ಭಕ್ತ ಗುರುವಿಗೆ ಈ ಸಂಗತಿಯನ್ನು ವರದಿಮಾಡಿ "ಓ ಗುರುವೆ, ನಿಮ್ಮ ದಾರಿ ತುಳಿದವನಿಗೆ ಶಿಕ್ಷೆ ಯೊದಗುತ್ತದೆ. ಸೂಳೆಯ ಮನೆಗೆ ಹೋದವನಿಗೆ ಚಿನ್ನದ ಮಳೆಗರೆಯುತ್ತದೆ. ಭಗವಂತನ ದಾರಿಗಳು ವಿಚಿತ್ರವಾಗಿವೆ" ಎಂದು ನುಡಿದನು. "ಮಗನೆ, ಭಗವಂತನ ಮಾರ್ಗವನ್ನಾಶ್ರಯಿಸಿದ್ದರಿಂದ ನಿನಗೆ ಸಂತೃಪ್ತಿ ಸಂತ್ರುಷ್ಟಿಗಳುಂ ಟಾಗಿವೆಯೆ ಇಲ್ಲವೆ ನಿನ್ನ ಮನಸ್ಸನ್ನು ಕೇಳಿ ತಿಳಿದುಕೊ. ಆ ಮನುಷ್ಯನಲ್ಲಿ ಅಂತ ರಂಗ ಶಾಂತಿ ಸಮತೂಕಗಳಿವೆಯೆ ಅಥವಾ ಮೋಹಲೋಭಗಳ ಬೆಂಕಿಯಲ್ಲಿ ಬೇಯುತ್ತಿದ್ದಾನೆಯೆ ವಿಚಾರಿಸಿ ನೋಡು. ಪ್ರಾಪಂಚಿಕ ಐಶ್ವರ್ಯದಿಂದ ಸುಖ ಅಥವಾ ತೃಪ್ತ ಜೀವನ ಒದಗಲಾರವು. ಚಿತ್ತಸಮತೆ ಹಾಗೂ ಹೃದಯ ಶುದ್ಧಿಗಳಿಂದ ಶಾಂತಿ ಲಭಿಸುತ್ತದೆ. ಭೋಗವಸ್ತುಗಳು ತೀರಿದ ಕೂಡಲೆ ನಿನ್ನ ಗೆಳೆಯ ದುಃಖಕ್ಕೀಡಾಗುತ್ತಾನೆ. ನೀನು ಪಡೆದಿರುವ ಐಶ್ವರ್ಯವಾದರೊ ನಶಿಸುವುದಿಲ್ಲ, ಸುಟ್ಟುಹೋಗುವುದಿಲ್ಲ. ಮುಳುಗಿಹೋಗುವುದಿಲ್ಲ; ಅದು ಯಾವಾಗಲೂ ನಿನ್ನ ಬಳಿ ನಿಲ್ಲುತ್ತದೆ. ಕ್ಷಣಿಕ ಸುಖಗಳಿಗೆ ಹಂಬಲಿಸುವ ಜನ ಶಾಶ್ವತ ಸುಖದ ಆನಂದವನ್ನು ಕಳೆದುಕೊಳ್ಳುತ್ತಾರೆ."

ಮುಂದಿನ ಹಳ್ಳಿಯನ್ನು ತಲುಪಿದಾಗ ಅಲ್ಲಿಯ ಗಂಡಸರು ಹೆಂಗಸರು ಹೃತ್ಪೂರ್ವಕವಾಗಿ ಗುರುವನ್ನು ಶುಶ್ರೂಷೆಗೈದರು. "ನೀವೆಲ್ಲರು ಚದುರಿ

ಹೋಗಿ" ಎಂದು ಗುರು ಹರಸಿದನು. ಮತ್ತೊಂದು ಹಳ್ಳಿಯಲ್ಲಿ ಅವನಿಗೆ ಉಚಿತವಾದ ಸ್ವಾಗತ ದೊರೆಯಲಿಲ್ಲ. "ಇದ್ದಲ್ಲಿಯೆ ನೀವು ನಿಲ್ಲಿ" ಎಂದು ಗುರು ಶಪಿಸಿದನು. ಇದರಿಂದ ಮರ್ದನ ತುಂಬ ಕಕಮಕಗೊಂಡನು. "ಗುರುವೆ ನಿಮ್ಮ ವರ್ತನೆ ವಿಚಿತ್ರವಾಗಿದೆ. ಯಾರು ಶ್ರದ್ಧೆಯಿಂದ ನಿಮ್ಮನ್ನು ಪೂಜಿಸಿದರೊ ಅವರು ಚದುರಿಹೋಗಲೆಂದು ಹರಸಿದಿರಿ; ಯಾರು ನಿಮ್ಮನ್ನು ಕಡೆಗಣಿಸಿದರೊ ಅವರು ಸುಭದ್ರವಾಗಿ ಮನೆಯಲ್ಲಿ ನಿಲ್ಲಲೆಂದು ಶಪಿಸಿದಿರಿ. ಇದು ಸರಿಯೆ ?" ಎಂದು ಪ್ರಶ್ನಿಸಿದನು. "ಓ ಮರ್ದನ, ಪರಸೇವಾತತ್ಪರರು ಚದುರುವುದಾದರೆ ಇತರರು ಅವರ ಆದರ್ಶವನ್ನನುಕರಿಸುತ್ತಾರೆ. ಯಾತ್ರಾರ್ಥಿಗಳನ್ನು ಹಾಗೂ ಸಾಧುಸಂತರನ್ನು ಹಗೆಯುವಂಥ ಜನ ನಿಂತಲ್ಲೆ ನಿಲ್ಲುವುದರಿಂದ ಅವರ ಕೆಟ್ಟ ನಡತೆ ಇತರರಿಗೆ ಸಾಂಕ್ರಾಮಿಕವಾಗಿ ಪರಿಣಮಿಸುವುದಿಲ್ಲ."

ಅನಂತರ ಗುರು ಅಸ್ಸಾಮಿನ ಕಾಮರೂಪವನ್ನು ತಲುಪಿದನು. ಆ ಪ್ರದೇಶದ ಸ್ತ್ರೀಯರು ಮೋಹಕತೆಗೂ ಪುರುಷರನ್ನಾಕರ್ಷಿಸುವ ವಿದ್ಯೆಗೂ ಪ್ರಸಿದ್ಧರಾಗಿದ್ದರು. ನೂರ್‌ಷಾ ಆ ಸೌಂದರ್ಯ ಸಾಮ್ರಾಜ್ಯದ ರಾಣಿಯಾಗಿದ್ದಳು. ಕ್ಷುಧಾಪೀಡಿತನಾದ ಮರ್ದನ ಎಂದಿನಂತೆ ನಗರಕ್ಕೆ ಹೋಗುವ ಸಲುವಾಗಿ ಗುರುವಿನ ಅನುಮತಿಯನ್ನು ಕೇಳಿದನು. ಸೌಂದರ್ಯರಾಜ್ಞಿಯ ಅರಮನೆಯನ್ನು ತಲುಪಿದ ಕೂಡಲೆ, ತನ್ನ ಮಂತ್ರ ಮಾಟಕ್ಕೆ ಸಗ್ಗಬಹುದಾದ ಮುಗ್ಧನೆಂದು ತಿಳಿದು ಅವಳು ಅವನನ್ನು ತನ್ನೆಡೆಗೆ ಬರಮಾಡಿಕೊಂಡಳು. ಮರ್ದನ ಅವಳ ಲಾವಣ್ಯಕ್ಕೂ ನಾಯಕಸಾನಿ ನಡತೆಗೂ ಮರುಳಾಗಿ ಅವಳಿಗೆ ಸಂಪೂರ್ಣ ವಶನಾದನು. ಅವನಿಗಾಗಿ ತುಸು ಹೊತ್ತು ಕಾದು, ಅವನು ಬರದಿರಲು, ಗುರು ಅವನನ್ನು ಹುಡುಕಿಕೊಂಡು ಹೊರಟನು. ಚೆಲುವೆಯ ಕೈಯಲ್ಲಿ ಸೆರೆಗೊಂಡಿದ್ದ ತನ್ನ ಸಂಗಾತಿಯ ಅವಸ್ಥೆಯನ್ನು ಕಂಡು, ಅವನನ್ನು ಬಿಟ್ಟುಕೊಡುವಂತೆ ಒತ್ತಾಯಪಡಿಸಿದನು. ಅವನು ತಾನಾಗಿಯೆ ತನ್ನ ಬಳಿ ಬಂದಿದ್ದುದಾಗಿಯೂ, ಅವನನ್ನು ಬಿಟ್ಟುಕೊಡಲಾಗದೆಂದೂ ಅವಳು ಹಠ ಹಿಡಿದಳು. ಮಿಟುಕಿನಿಂದ ಹಾಗೂ ಸವಿನಡತೆಯಿಂದ ಗುರುವನ್ನೆ ಮರುಳುಗೊಳಿಸಲು ಪ್ರಯತ್ನಿಸಿದಳು. "ಹೊಟ್ಟು ಮಾರುವವಳು ತನ್ನ ಸರಕನ್ನು ಸುಗಂಧದ್ರವ್ಯದೊಡನೆ ವಿನಿಮಯಮಾಡಲಾದೀತೆ ? ಸತ್ಯಮಾರ್ಗ

ಚರಣೆಯಿಲ್ಲದವರಿಗೆ ನಿಜವಾದ ಗಂಡಹೆಂಡಿರು ದೊರೆಯಲಾರರು" ಎಂದು ಗುರು ತಿಳಿಸಿ ಅವಳ ಹಾವಭಾವಗಳನ್ನು ತಡೆದನು.

ನೂರ್ ಷಾ ಅಲ್ಲಿಗೆ ತೆಪ್ಪಗಾಗಲಿಲ್ಲ. ನಾನಕನನ್ನು ವಶಪಡಿಸಿಕೊಳ್ಳುವ ಸಲುವಾಗಿ ನರ್ತಿಸತೊಡಗಿದಳು. ಅವಳ ಅಭಿನಯ ವಿಲಾಸಕ್ಕೆ ಬೆಡಗಿನ ಮುದ್ರೆಗಳಿಗೆ ಚರಣಗತಿಯ ಚಟುಲತೆಗೆ ಭಾವಾಭಿವ್ಯಕ್ತಿಯ ಮನೋಹರತೆಗೆ ಸಾಮಾನ್ಯ ಜನ ವಶವಾಗದಿರಲಾರರು. ಆದರೆ ಗುರು ವಿಚಲಿತನಾಗಿ ಕುಳಿತು ಹಾಡತೊಡಗಿದನು: "ಎದೆಯ ಬಯಕೆಗಳು ತಾಳ ಕಾಲ್ಕಡಗಗಳಂತೆ ಘಲಿರೆನ್ನುತ್ತವೆ; ಜಗತ್ತೆಂಬ ಮದ್ದಲೆ ಆ ತಾಳಕ್ಕನುಗುಣವಾಗಿ ಬಾರಿಸುತ್ತದೆ. ಅಂಥ ಸಮಯದಲ್ಲಿ ಪ್ರಾಜ್ಞರೂ ಆ ಧಾಟಿಗನುಗುಣವಾಗಿ ಹೆಜ್ಜೆ ಹಾಕುತ್ತಾರೆ. ಓ ದೇವರೆ, ಹಾಗಾದರೆ ಸಂಯಮಗಳಿಗೆ ಕಾಲಿಡಲು ತಾವಿದೆಯೆ? ಎಲ್ಲ ನಲಿವು ಹರಕೆಗಳು ವ್ಯಾಪಾರ ಸಾಮಗ್ರಿಗಳಾಗಿವೆ, ನಿಜ. ಆದರೆ ಎಷ್ಟು ದಿನ ತಾನೆ ಮನುಷ್ಯ ಭೋಗಮತ್ತನಾಗಿದ್ದು ಅಂತರಾತ್ಮನನ್ನೂ ದೇವರನ್ನೂ ಮರೆಯಲಾದೀತು? ಅನುಕಂಪೆಯುಳ್ಳ ಮನುಷ್ಯರಿಲ್ಲ, ನ್ಯಾಯಶೀಲರಾದ ದೊರೆಗಳಿಲ್ಲ. ತೋರಿಕೆಗೆ ಅವರು ಮಾನವರು, ವರ್ತನೆಯಿಂದ ನಾಯಿಗಳು. ಸೌಂದರ್ಯನಂದನದಲ್ಲಿ ಅತಿಥಿಯೆಂದು ತಿಳಿದು, ಭಗವಂತನಿಂದ ದೂರವಾಗದವನು ಧನ್ಯ."

ಅನಂತರ ಧನಕನಕಗಳಿಂದ ನಾನಕನನ್ನು ಭ್ರಷ್ಟಗೊಳಿಸುವಂತೆ ನೂರ್ ಷಾ ತನ್ನ ಸಂಗಾತಿಗಳಿಗೆ ಹೇಳಿದಳು. ಚಿನ್ನ ಒಡವೆ ಸುಗಂಧದ್ರವ್ಯ ಪೀತಾಂಬರ ಮತ್ತು ಸವಿಯುಣಿಸುಗಳನ್ನು ರಾಶಿಗೈದು, ಅವನನ್ನು ಸಂತುಷ್ಟಿಪಡಿಸಿ, ಯಜಮಾನಸ್ಥಾನದಲ್ಲಿಯೋ ಗುಲಾಮಿಸ್ಥಾನದಲ್ಲಿಯೋ ತಮ್ಮೊಡನಿರಿಸಿಕೊಳ್ಳಬೇಕೆಂದು ಅವರು ಹವಣಿಸಿದರು. ಆದರೆ ಗುರು ಅವುಗಳಿಗೆ ಮನಗೊಡದೆ ಮುಂದಿನ ವಚನವನ್ನು ಸಾರಿದನು: "ಓ ತಿಳಿಗೇಡಿ ಹೆಂಗಸೆ, ನಿನ್ನಲ್ಲಿರುವ ಅಂದಚೆಂದಕ್ಕಾಗಿ ಹಣಕಾಸುಗಳಿಗಾಗಿ ಬೀಗುತ್ತಿರುವೆ. ನೀನು ದೂರದಲ್ಲೆಲ್ಲೊ ಹುಡುಕಾಡುತ್ತಿರುವ, ಹತ್ತಿರಕ್ಕಿಂತ ಹತ್ತಿರವಾಗಿ, ನಿನ್ನೊಳಗೇ ಹುದುಗಿರುವ ಅಂತರಾತ್ಮ ಪತಿಯನ್ನು ಆರಾಧಿಸು. ಅವನ ಭಯವೆ ನಿನಗೆ ನೇತ್ರಾಂಜನವಾಗಲಿ, ಅವನ ಪ್ರೇಮವೆ ನಿನ್ನ ಆಭರಣವಾಗಲಿ. ನೀನವನನ್ನು ಪ್ರೀತಿಸದಿದ್ದರೆ, ಅವನೊಡನೆ ಕುಯುಕ್ತಿಯಿಂದ ವರ್ತಿಸುವು

ದಾದರೆ, ವೇಶ್ಯಾಚೇಷ್ಟೆಗಳ ಮೂಲಕ ಅವನನ್ನೊಲಿಸಿಕೊಳ್ಳುವುದಾಗಿ ನಂಬಿ ಕೊಂಡಿದ್ದರೆ, ನಿನ್ನ ಮನಸ್ಸು ಆಶೆ ಆಮಿಷಗಳಿಂದ ಆವೃತವಾಗಿದ್ದರೆ, ನೀನು ಭಗವಂತನನ್ನು ವಶಪಡಿಸಿಕೊಳ್ಳಲಾರೆ. ಪ್ರೇಮಸ್ವರೂಪನಾದ ಭಗವಂತನಲ್ಲಿ ತನ್ನನ್ನೆಲ್ಲ ಮಗ್ನಗೊಳಿಸುವವಳೇ ಸುಂದರಿ, ಅವಳೇ ಗುಣವಂತೆ, ಅವಳೇ ವಿವೇಕಿ, ಅವಳೇ ಜಾಣೆ."

ನಾನಕ್‌ನ ಆತ್ಮಕ್ಷಾಲನ ಸಂದೇಶದಿಂದ ನೂರ್‌ಷಾ ತುಂಬ ಪರಿವರ್ತನೆ ಗೊಂಡಳು. ಅವನ ಮುಂದೆ ಕೈಮುಗಿದು ನಿಂತುಕೊಂಡು, ಹಿಂದಿನ ಪಾಪ ಕರ್ಮಗಳನ್ನೆಲ್ಲ ಕ್ಷಮಿಸಿ ತನ್ನ ಶಿಷ್ಯತ್ವವನ್ನು ಸ್ವೀಕರಿಸುವಂತೆ ಯಾಚಿಸಿದಳು. "ನೀನೇನೇ ಮಾಡುತ್ತಿದ್ದರೂ, ಚಿತ್ತದಲ್ಲಿ ಸದಾ ಭಗವಂತನನ್ನು ನೆನೆಯು ತ್ತಿದ್ದರೆ ನೀನು ಅವನ ಅನುಗ್ರಹಕ್ಕೆ ಪಾತ್ರಳಾಗುತ್ತೀಯೆ, ಪಾಪಮುಕ್ತ ಳಾಗುತ್ತೀಯೆ" ಎಂದು ಗುರು ಬೋಧಿಸಿದನು. ಅವಳು ಕೂಡಲೆ ಮರ್ದನನನ್ನು ಬಿಡುಗಡೆಮಾಡಿದಳು. ಗುರುಪಥದಲ್ಲಿ ದೃಢವಾಗಿರಿಸುವಂಥ ಶಕ್ತಿ ಲಭಿಸು ವಂತೆ ಆಶೀರ್ವದಿಸಬೇಕೆಂದು ನಾನಕನನ್ನು ಪ್ರಾರ್ಥಿಸಿದಳು.

ಅಲ್ಲಿಂದ ಗುರು ತನ್ನ ಸಂಗಾತಿಯೊಡನೆ ನಿರ್ಜನ ಪ್ರದೇಶದ ಕಡೆಗೆ ಮುಖ ಮಾಡಿದನು. ಆ ಪಾಳುಗಾಡಿನಲ್ಲಿ ಜಂಝಾಮಾರುತ ಗುಟರೆ ಹಾಕುತ್ತ, ಮುದಿಮರಗಳನ್ನು ಬೇರುಸಹಿತ ಉರುಳಿಸುತ್ತಿತ್ತು. ಒಡನೆಯೆ ಸಿಡಿಲು ಗುಡುಗು ಮಳೆ ಭೋರ್ಗರೆದುವು. ಆಕಾಶ ಕಪ್ಪಾಯಿತು ; ಬೆಂಕಿ ಮತ್ತು ರಕ್ತ ಹೊಳೆಗಳಿಂದ ಭಯಂಕರವಾಯಿತು. ಮರ್ದನ ಭಯೋದ್ವಿಗ್ನನಾಗಿ "ಗುರುವೆ, ನಿಮ್ಮ ರೀತಿನೀತಿಗಳೇ ವಿಚಿತ್ರವಾಗಿವೆ. ನನ್ನನ್ನೀಗ ನಿರ್ಜನ ಪ್ರದೇಶಕ್ಕೆ ಕರೆತಂದಿದ್ದೀರಿ. ನಾನಿಲ್ಲಿ ಸತ್ತರೆ ನನ್ನನ್ನು ವಿಧಿಪೂರ್ವಕ ಮಣ್ಣು ಮಾಡುವವರಿಲ್ಲ. ನನ್ನ ಮಾಂಸ ಕಾಡುಪ್ರಾಣಿಗಳಿಗೆ ಉಣಿಸಾಗುತ್ತದೆ" ಎಂದು ನುಡಿದನು. "ಮರ್ದನ, ಜನನ ಮರಣಗಳು ಭಗವಂತನ ಕೈಯಲ್ಲಿವೆ. ಅವನ ಭಯ ಬುವಿಬಾನು ಪಂಚಭೂತಗಳನ್ನೆಲ್ಲ ವ್ಯಾಪಿಸಿದೆ. ಭಯವಿದೂರನೂ ಶಾಶ್ವತನೂ ಆದ ಒಡೆಯನಲ್ಲಿ ಶರಣಾಗತಿ ಹೊಂದುವುದಾದರೆ ಅವನಿಗೆ ದುಃಖವೊದಗುವುದಿಲ್ಲ" ಎಂದು ನಾನಕ್ ನಗುತ್ತ ನುಡಿದನು.

ಹೀಗೆ ಸಂಭಾಷಣೆಯಲ್ಲಿ ಮಗ್ನರಾಗಿದ್ದಾಗ ಅರ್ಧನರಾಕೃತಿಯ ಭೀಕರ ರೂಪದ ಕಾಡುಪ್ರಾಣಿಯೊಂದು ತಮ್ಮ ಕಡೆಗೆ ಬರುತ್ತಿದ್ದುದನ್ನು ಅವರು

ಕಂಡರು. "ಓ ಸೋದರನೆ, ನೀನು ಯಾರು ? ಈ ಅವೇಳೆಯಲ್ಲಿ ನಮ್ಮಲ್ಲಿಗೇಕೆ ಬಂದೆ ?" ಎಂದು ಗುರು ಪ್ರಶ್ನಿಸಿದನು. "ನಾನು ಕಲಿಯುಗದ ಶಕ್ತಿ. ನಿನ್ನನ್ನು ಮರುಳುಗೊಳಿಸುವ ಸಲುವಾಗಿ ಬಂದಿದ್ದೇನೆ. ಈ ಮುಂಚೆ ನಿನ್ನ ಕಣ್ಮುಂದೆ ನಡೆದ ಘೋರ ಘಟನೆಗಳಿಗೆಲ್ಲ ನಾನೇ ಕಾರಣ. ನೀನು ಅವುಗಳಿಗೆ ಹೆದರಲಿಲ್ಲವಾಗಿ, ಚಿನ್ನವನ್ನೂ ಒಡವೆಗಳನ್ನೂ, ರಾಜಸೌಧಗಳನ್ನೂ ನಿನ್ನ ಭೋಗಕ್ಕಾಗಿ ಸುರಸುಂದರಿಯರಾದ ಅಪ್ಸರೆಯರನ್ನೂ, ಸಮರ್ಪಿಸಲು ಬಂದಿದ್ದೇನೆ. ಇಷ್ಟರಿಂದಾದರೂ ನೀನು ನನ್ನ ದಾರಿಯನ್ನು ತುಳಿಯಬಹುದೆಂಬ, ಇತರರು ನಿನ್ನ ಆದರ್ಶವನ್ನು ಪರಿಪಾಲಿಸಬಹುದೆಂಬ ಭರವಸೆ ನನಗಿದೆ" ಎಂದು ಅವನು ನುಡಿದನು.

ರಿಬೆಕ್ ನುಡಿಸುವಂತೆ ಗುರು ಮರ್ದಾನನಿಗೆ ತಿಳಿಸಿ, ಮುಂದಿನ ಸ್ತೋತ್ರವನ್ನು ಹಾಡಿದನು :

> ಹರಳು ಕೊರಿಸಿದ, ಕಸ್ತೂರಿ ಕೇಸರಿ ಶ್ರೀಗಂಧ ಹಾಲುಮಡ್ಡಿಗಳಿಂದ
> ಸುಗಂಧಿತವಾದ ಮುತ್ತಿನರಮನೆ ಕೈಚಾಚಿ ಕರೆಯುವುದಾದರೂ,
> ನೆಲ ವಜ್ರ ವೈಢೂರ್ಯಗಳಿಂದ ಕೆತ್ತಿದ್ದರೂ,
> ಹೇಮಕಾಂತಿಯ ಸುರಸೌಂದರ್ಯದ ಅಪ್ಸರೆಯರು ತಮ್ಮ ಹಾವಭಾವ
> ಗಳಿಂದ ನನ್ನನ್ನು ತೃಪ್ತಿಗೊಳಿಸಲೆಳಸಿದರೂ ನಾನು ಭಗವಂತನ
> ಕೈಬಿಡಲಾರೆ ; ಅವನ ಹೆಸರಿನ ಆಸರೆಯನ್ನು ತ್ಯಜಿಸಲಾರೆ.
> ನಾನೊಬ್ಬ ಸಿದ್ಧನಾಗಿದ್ದು ಸಮಾಧಿಸ್ಥನಾಗಿ ಪವಾಡಗಳನ್ನು ಮೆರೆಯು
> ವಂತಿದ್ದರೂ ಒಮ್ಮೆ ಗೋಚರವಾಗುವ, ಮತ್ತೊಮ್ಮೆ ಅಗೋಚರ
> ವಾಗುವ ಸಂಕಲ್ಪಶಕ್ತಿ ನನಗಿದ್ದು, ಅದಕ್ಕಾಗಿ ಜನ ನನ್ನನ್ನು
> ಆರಾಧಿಸುವಂತಿದ್ದರೂ ನಾನು ಭಗವಂತನ ಕೈಬಿಡಲಾರೆ ; ಅವನ
> ಹೆಸರಿನ ಆಸರೆಯನ್ನು ತ್ಯಜಿಸಲಾರೆ.
> ನಾನೊಬ್ಬ ಚಕ್ರವರ್ತಿಯಾಗಿ, ಸಿಂಹಾಸನದ ಮೇಲೆ ಕುಳಿತಿದ್ದರೂ,
> ನನ್ನ ಆಣತಿಯನ್ನು ಪರಿಪಾಲಿಸುವಂಥ ದೊಡ್ಡ ಸೈನ್ಯವನ್ನು
> ಹೊಂದಿದ್ದರೂ
> ಓ ನಾನಕ್, ಅದೆಲ್ಲ ಗಾಳಿಯಂತೆ ವ್ಯರ್ಥ.

ಏನಿದ್ದರೂ ಭಗವಂತನ ಕೈಯಾಸರೆಗಾಗಿ ಸದಾ ಪ್ರಾರ್ಥಿಸುತ್ತೇನೆ.

ನಾನಕ್ ತಾನೊಡ್ಡಿದ ಮಾಯಾಜಾಲವನ್ನೆಲ್ಲ ಹರಿದು ಬಿಸಾಡಿದಾಗ ಭೇತಾಳ ಅವನ ಪಾದಗಳ ಮೇಲೆ ಬಿದ್ದು "ಓ ನಾನಕ್, ನಿನ್ನ ಭಕ್ತನಿಗೆ ಜಗತ್ತಿನ ಶ್ರೀಮಂತಿಕೆಯನ್ನೆಲ್ಲ ಅನುಗ್ರಹಿಸಬಲ್ಲೆ, ಆದರೆ ಅವನ ಚಿತ್ತಶಾಂತಿಯನ್ನು ಮಾತ್ರ ಕದಡಲಾರೆ" ಎಂದು ನುಡಿದನು.

ಗುರು ಬ್ರಹ್ಮಪುತ್ರ ನದಿಯ ಬೆಂಬಳಿಯಲ್ಲಿ ಹಿಂದಿರುಗಿ ಬಂಗಾಳಕೊಲ್ಲಿಯ ಪೂರಿ ಕಡೆಗೆ ಹೊರಟನು. ಅದು ವಿಶ್ವಪ್ರಭುವಾದ ಜಗನ್ನಾಥನ ಆವಾಸ ಸ್ಥಾನ. ಸಂಜೆ ಪುರೋಹಿತರು ಬೆಳ್ಳಿಯ ತಟ್ಟೆಗಳಲ್ಲಿ ಮಣ್ಣಿನ ಹಣತೆಯನ್ನಿಟ್ಟು ಜಗನ್ನಾಥನ ವಿಗ್ರಹದ ಮುಂದೆ ಆರತಿಯೆತ್ತಿ, ಸುಗಂಧ ದ್ರವ್ಯಗಳನ್ನು ಉರಿಸಿದಾಗ "ಇದೆಲ್ಲ ಏನು ?" ಎಂದು ಗುರು ಪ್ರಶ್ನಿಸಿದನು.

"ವಿಶ್ವನಾಥನಿಗೆ ಗೌರವ ಸಲ್ಲಿಸುವ ರೀತಿಯೇ ಹೀಗೆ. ಇತರರಂತೆ ನೀವೂ ಈ ಪೂಜಾಕಾರ್ಯದಲ್ಲಿ ಭಾಗವಹಿಸಿ" ಎಂದು ಪುರೋಹಿತರು ಉದ್ಗರಿಸಿದರು. ಆಗ ಗುರು ಭಾರತೀಯ ಅನುಭಾವ ಕಾವ್ಯ ಶ್ರೇಣಿಯಲ್ಲಿಯೇ ಅತ್ಯಂತ ಸುಂದರವಾದ ಸ್ತೋತ್ರವೊಂದನ್ನು ಹಾಡಿದನು :

"ಆಕಾಶವೇ ತಟ್ಟೆ, ಸೂರ್ಯಚಂದ್ರರೇ ಸೊಡರುಗಳು, ನಕ್ಷತ್ರಗಳೇ
ಅದರಲ್ಲಿ ಕೇವಣಿಸಿದ ರತ್ನಗಳು ;
ಮಾಲಿಪರ್ವತದ ಮೇಲಣ ಶ್ರೀಗಂಧ ಸುತ್ತಲೂ ಕಂಪು ಚೆಲ್ಲುತ್ತದೆ ;
ಭೂಮಿಯ ಮೇಲಣ ಹೂಗಳ ಪರಿಮಳವನ್ನು ಗಾಳಿ ಎಲ್ಲೆಲ್ಲೂ
ಹರಡುತ್ತದೆ ;
ನಿನ್ನ ಪೂಜೆಯಿಂತು ಸದಾ ನಡೆಯುತ್ತಿದೆ, ಓ ಭಯವಿನಾಶನ
ಮೂರ್ತಿಯೆ
ವಿಶ್ವದಲ್ಲೆಲ್ಲ ನಿನ್ನ ಅವ್ಯಕ್ತರಾಗವೊಂದು ಮಿಡಿಯುತ್ತಿದೆ.
ನೀನು ಸಹಸ್ರಾಕ್ಷನಾದರೂ ನಿನಗೆ ಕಂಗಳೆರಡಿವೆ ;
ನೀನು ಸಹಸ್ರರೂಪಿಯಾದರೂ ನಿನಗೊಂದು ಆಕಾರವಿದೆ ;
ನೀನು ಸಹಸ್ರಪಾದಿಯಾದರೂ ಅಡಿಗಳೆರಡಿವೆ ;
ಘ್ರಾಣೇಂದ್ರಿಯ ಸಹಸ್ರವಿದ್ದರೂ ಮೂಗೊಂದಿದೆ ನಿನಗೆ ;

ನೀನು ಅದ್ಭುತಗಳಲ್ಲೆಲ್ಲ ಅದ್ಭುತ.
ಗುರುಬೋಧೆಯಿಂದ ವ್ಯಕ್ತವಾಗುವ, ಎದೆಗಳನ್ನೆಲ್ಲ ಬೆಳಗುವ ಬೆಳಕು
 ನೀನು.
ಓ ಮಾನವರೆ, ನನ್ನ ದೈವವನ್ನು ತೃಪ್ತಿಪಡಿಸುವುದೇ ಪೂಜೆ.
ನನ್ನ ಆತ್ಮಭ್ರಮರ ಅವನ ಪಾದಕಮಲಗಳ ಜೇನಿಗೆ ಹಾತೊರೆಯು
 ತ್ತಿದೆ, ಹಾಗೂ ಮೊರೆಯಿಡುತ್ತಿದೆ :
"ಓ ದೇವರೆ, ನಿನ್ನ ಕರುಣಾವರ್ಷದಿಂದ ನಿನ್ನ ಕೋಗಿಲೆ ನಾನಕನನ್ನು
 ಹರಸು ; ನಿನ್ನ ನಾಮದಲ್ಲಿ ವಿಲೀನವಾಗುವಂತೆ ಅನುಗ್ರಹಿಸು !"

ಅವನೊಡನೆ ವಾದವಿವಾದ ಬೆಳೆಸುವುದು ನಿಷ್ಪ್ರಯೋಜಕವೆಂದು ತಿಳಿದ ಪುರೋಹಿತರು ಅನಂತರ ಅವನ ಗೋಜಿಗೆ ಹೋಗಲಿಲ್ಲ.

ಇಂದ್ರಿಯ ಸುಖಗಳ ವಾಸನೆಯೂ ಹತ್ತಿರ ಸುಳಿಯದಿರಲೆಂದು ಕಣ್ಣು ಕಿವಿ ಮುಚ್ಚಿಕೊಂಡಿದ್ದ ಬ್ರಾಹ್ಮಣನೊಬ್ಬನನ್ನು ನಾನಕ್ ಪೂರಿಯಲ್ಲಿ ಸಂಧಿಸಿದನು. ಇಂಥ ಸಾಧನೆಯಿಂದ ತನಗೆ ಚಿತ್ತೈಕಾಗ್ರತೆ ಪ್ರಾಪ್ತವಾಗಿ ತ್ತೆಂದೂ, ಇತರರ ಅಂತರಂಗದ ಗುಟ್ಟನ್ನರಿಯುವ ಸಿದ್ಧಿ ತನಗೆ ಲಭಿಸಿ ತ್ತೆಂದೂ ಅವನು ಹೇಳಿಕೊಳ್ಳುತ್ತಿದ್ದನು. ಗುರು ಅವನನ್ನು ಪರೀಕ್ಷೆಗೀಡು ಮಾಡಿದನು. ಅವನು ತನ್ನ ಮುಂದಿದ್ದ ನೀರಿನ ಹೂಜಿಯನ್ನೆತ್ತಿಕೊಂಡು, ಅವನ ಬೆನ್ನಿನ ಮೇಲಿರಿಸಿ "ನಿನ್ನ ಹೂಜಿಯೆಲ್ಲಿದೆ, ಹೇಳಬಲ್ಲೆಯಾ ?" ಎಂದು ಪ್ರಶ್ನಿಸಿದನು. ಬ್ರಾಹ್ಮಣನ ಊಹೆಗಳೆಲ್ಲ ಸುಳ್ಳಾದುವು. ಕೊನೆಗೆ ಅವನ ಬಾಯಿಂದ ಮಾತು ಹೊರಡಲಿಲ್ಲ. ಅನಂತರ ಗುರು ಅವನ ತಿಳಿವಳಿಕೆ ಗಾಗಿ ಕೆಳಗಣ ಸ್ತೋತ್ರವನ್ನು ಪಠಿಸಿದನು :

"ನರರಿಗೆ ಯುಗಧರ್ಮವಾಗಲಿ, ಯೋಗರಹಸ್ಯವಾಗಲಿ, ಸತ್ಯಮಾರ್ಗ
 ವಾಗಲಿ ತಿಳಿದಿಲ್ಲ.
ಪವಿತ್ರ ಸ್ಥಳಗಳೆಲ್ಲ ಅಪವಿತ್ರವಾಗಿ ಹೊಲಸಾಗಿವೆ; ಇಡೀ ಜಗವೆ
 ಹೀಗೆ ಹೊಲಸಿನಲ್ಲದ್ದಿದೆ.
ಕಲಿಯುಗದಲ್ಲಿ ಭಗವನ್ನಾಮವೆ ಮಾನವನ ಮೋಕ್ಷಕ್ಕೆ ಮಾರ್ಗವಾಗ
 ಬೇಕಾಗಿದೆ.

ಜನ ಮೂಗು ಹಿಡಿದು ಕಣ್ಣು ಮುಚ್ಚಿ ಮೂರು ಲೋಕವೂ ಕಂಡಿ
ತೆಂದು ಬರಿದೆ ನಟಿಸುತ್ತಾರೆ ;
ತಮ್ಮ ಹಿಂದೆ ‘ಏನಿದೆಯೆಂಬುದೇ ಅವರಿಗೆ ತಿಳಿಯದು. ಇದೆಂಥ
ಪವಾಡ !”

## ೪

"ಸಂತ ಮಾತ್ರ ನಿಜ ನುಡಿಯುತ್ತಾನೆ,
ಏಕೆನೆ, ನೋಡಿದ್ದನ್ನೆ ನುಡಿಯುತ್ತಾನೆ".

—ಗುರು ಅರ್ಜುನ

ಗುರು ಪುರಿಯಿಂದ ಪಂಜಾಬಿಗೆ ಹಿಂದಿರುಗಿದನು. ಅವನು ಗೃಹಸ್ಥನಂತೆ ಬಟ್ಟೆ ಹಾಕಿಕೊಂಡು, ಪಾಕ್ ಪಟ್ಟಣದಲ್ಲಿದ್ದ ಹದಿಮೂರನೆಯ ಶತಮಾನದ ಮಹಾಮುಸ್ಲಿಮ್ ಸೂಫಿ ಷೇಖ್ ಫರೀದುದ್ದೀನ್ ಗಾಂಜ್-ಇ-ಷಕರ್‌ನ ಗುಂಬಜಿಗೆ ಹೋದನು. ಆ ಗುಂಬಜಿನ ಧರ್ಮದರ್ಶಿ ಷೇಕ್ ಇಬ್ರಾಹಿಮ್ ಅವನ ಗೃಹಸ್ಥ ವೇಷವನ್ನು ಕಂಡು

"ಇಹವೊ ಪರವೊ ಒಂದನ್ನು ನರ ಹಂಬಲಿಸಬೇಕು.
ದೋಣಿಯೆರಡರಲಿ ಕಾಲಿಡಲು ಮುಳುಗಬಹುದೊಂದು."

ಎಂದು ನುಡಿದನು. ನಾನಕ್ ಈ ರೀತಿ ಉತ್ತರವಿತ್ತನು :

"ಇಹವೊಂದರಲಿ, ಪರವೊಂದರಲಿ, ಎರಡನೂ ಬಳಸಬಹುದಲ್ಲವೆ ?
ಅಂತಿರಲು ಮುಳುಗಡೆಯು ಭಯವಿಲ್ಲ, ನಷ್ಟವಿನಿತಿಲ್ಲ ; ದೋಣಿ ನೀರು
ಗಳೆರಡು ಕಾಣಿಸವು
ಸ್ವಸಂಕಲ್ಪದಿಂದ ಸರ್ವವ್ಯಾಪಿಯೂದ ಸತ್ಯಸ್ಯ ಸತ್ಯವಾದ ದೇವರ
ವಸ್ತುವನ್ನು ಮಾತ್ರ ಅವನು ಧ್ಯಾನಿಸುತ್ತಾನೆ."

ಅನಂತರ ಇಬ್ರಾಹಿಮ್ ಗುರುವನ್ನು ಅಧ್ಯಾತ್ಮ ಚರ್ಚೆಗೆ ಆಹ್ವಾನಿಸಿ, ದೇವರು ಮನುಷ್ಯ ಮತ್ತು ಪ್ರಪಂಚಗಳ ಬಗ್ಗೆ ತಾನು ತಾಳಿದ್ದ ನಂಬಿಕೆಯನ್ನು ತಿಳಿಸುವ ಸಲುವಾಗಿ ನಾನಾ ರೂಪಕ ಮತ್ತು ಸಂಕೇತಗಳನ್ನು ಬಳಸಿದನು. "ಇಡೀ ಜಗತ್ತು 'ಮಾಯೆಗೆ' (ಮಾಟಗಾತಿಗೆ) ಮರುಳಾಗಿದೆ ; ಒಳಹೊಕ್ಕು ನೋಡಿದಾಗ ಅದು ಬರಿ ಮಿಥ್ಯೆ ; ಮೇಲೆ ಮೇಲೆ ನೋಡುತ್ತಿದ್ದಂತೆ ಅವನ 'ಕೃಷಿಕ್ಷೇತ್ರ' ನಾಶಹೊಂದುತ್ತದೆ" ಎಂದವನು ನುಡಿದನು.

ಗುರು ಅವನ ಬಾಣವನ್ನು ಅವನಿಗೇ ತಿರುಗಿಸಿದನು: "ಅನಾದಿಕಾಲ ದಿಂದಲೂ ಮನುಷ್ಯರು 'ಮಾಯೆ'ಯ ಬಲೆಯಲ್ಲಿ ಸಿಲುಕಿಕೊಂಡಿದ್ದಾರೆ. ಆದರೆ ತನ್ನ ಕೃಷಿಕ್ಷೇತ್ರವನ್ನು ಜಾಗರೂಕನಾಗಿ ಕಾದುಕೊಂಡಿರುವಾತ ಅದು ನಾಶವಾಗಲಿಕ್ಕೆ ಬಿಡುವುದಿಲ್ಲ."

"ನನ್ನ ಬಲವುಡುಗಿದೆ, ಚಿತ್ತ ಹರಿದಿದೆ, ದೇಹ ನಿಷ್ಕ್ರಿಯವಾಗಿದೆ. ಓ ಪ್ರೇಮವೆ, ನನ್ನ ರೋಗಕ್ಕೆ ತಕ್ಕ ಮದ್ದನ್ನು ತಾ" ಎಂದು ಇಬ್ರಾಹಿಮ್ ಸವಾಲು ನುಡಿದನು. "ಸತ್ಯವೇ ನಿನ್ನ ವೈದ್ಯ; ಅವನು ಹೊರಗಿಲ್ಲ, ಒಳಗಿದ್ದಾನೆ. ಅವನನ್ನು ಹೊರಗಿಂದ ಕರೆಯುವುದೇ ಮಿಥ್ಯೆ. ತನ್ನೊಳಗೇ ಅವನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು" ಎಂದು ನಾನಕ್ ಜವಾಬು ಕೊಟ್ಟನು.

"ಸಾಕಷ್ಟು ಸಮಯವಿದ್ದಾಗ ದೋಣಿ ಕಟ್ಟಲಿಲ್ಲ; ಈಗ ನದಿಯಲ್ಲಿ ನೆರೆ ಬಂದಿದೆ. ಇದನ್ನು ನಾನೆಂತು ದಾಟಲಿ ? ಓ ಪ್ರೇಮವೆ, ಕುಂಕುಮಕೇಸರಿಯನ್ನು ಮುಟ್ಟಬೇಡ; ಅದರ ಬಣ್ಣ ಮಸಕಾಗುತ್ತದೆ. ಆತ್ಮ ದುರ್ಬಲವಾಗಿದೆ. ಪ್ರಿಯನ ಬೆಸವನ್ನು ತಾಳಲಾರೆ. ಒಮ್ಮೆ ಕರೆದ ಹಸು ಮತ್ತೆ ಹಾಲು ಕೊಡುವುದಿಲ್ಲ; ಅಂತೆಯೇ ನಮ್ಮ ಬಿಡಿ ಬದುಕು.ಆಚೆಯ ಕರೆ ಕೇಳಿಸುತ್ತಿದೆ; ತಾನು ನಿರ್ಗಮಿಸಬೇಕಲ್ಲ ಎಂದು ಆತ್ಮಹಂಸ ಮರುಗುತ್ತಿದೆ; ದೂಳು ದೂಳಿಗೆ ಹಿಂದಿರುಗುತ್ತದೆ" ಎಂದು ಷೇಕ್ ಇಬ್ರಾಹಿಮ್ ಸಂಕಟದಿಂದ ನುಡಿದನು. "ಧ್ಯಾನ ಮತ್ತು ಆತ್ಮಸಂಯಮಗಳ ದೋಣಿಯನ್ನು ಕಟ್ಟಿದ್ದಾದರೆ ದಾಟು ಸುಲಭವಾಗುತ್ತದೆ. ಆಗ ಕುಪಿತ ನದಿಯನ್ನೆದುರಿಸಬೇಕಾಗಿಲ್ಲ; ದಾರಿ ಸುಗಮವಾಗುತ್ತದೆ. ಯಾರು ಅಹಂಕಾರ ದುಷ್ಪ್ರವೃತ್ತಿಗಳನ್ನು ತ್ಯಜಿಸಿ, ತಪಶ್ಶಕ್ತಿಯನ್ನು ಗಳಿಸುತ್ತಾರೆಯೊ ಅಂಥವರನ್ನು ದೇವರೇ ತನ್ನ ಮಡಿಲಲ್ಲಿರಿಸಿ ಕೊಳ್ಳುತ್ತಾನೆ; ಎಂದಿಗೂ ಅವರನ್ನು ಕೈ ಬಿಡುವುದಿಲ್ಲ" ಎಂದು ನಾನಕ್ ಆಶಾದಾಯಕ ಧ್ವನಿಯಲ್ಲಿ ಉತ್ತರಿಸಿದನು.

"ನಾನು ನಿಮ್ಮ ಮಾತನ್ನೊಪ್ಪುತ್ತೇನೆ. ಆದರೆ ಮರ ರಾತ್ರಿಯ ಪ್ರಥಮ ಪಾದದಲ್ಲಿ ಹೂ ಬಿಡುತ್ತದೆ; ಅನಂತರ ಹಣ್ಣಾಗುತ್ತದೆ. ರಾತ್ರಿಯೆಲ್ಲ ಎಚ್ಚೆತ್ತಿರುವವನು ಮಾತ್ರ ಭಗವತ್ಕೃಪೆಗೆ ಪಾತ್ರನಾಗುತ್ತಾನೆ" ಎಂದು ಷೇಕ್ ಇಬ್ರಾಹಿಮ್ ಸವಾಲೆಸೆದ. "ನೀವು ನನ್ನನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲ. ದಾನಧರ್ಮಗಳು ಭಗವಂತನ ಕೈಯಲ್ಲಿವೆ. ಕೆಲವರು ಎಚ್ಚರವಾಗಿ

ದ್ದರೂ ಅವರ ಕಡೆಗೆ ಕಣ್ಣು ಹಾಯಿಸದೆ ಭಗವಂತ ಮುಂದೆ ಹಾದುಹೋಗು ತ್ತಾನೆ; ಮತ್ತೆ ಕೆಲವರು ಗಾಢನಿದ್ರೆಯಲ್ಲಿದ್ದರೂ ಎಬ್ಬಿಸಿ ಹರಸುತ್ತಾನೆ." ಎಂದು ನಾನಕ್ ಜವಾಬು ನೀಡಿದನು.

ಮೇಲಣ ಸಂಗತಿಯನ್ನು ವಿವರಿಸುತ್ತ ನಾನಕ್ ನುಡಿದನು: "ಮನುಷ್ಯ ತನ್ನ ಪ್ರಯತ್ನದ ಫಲವಾಗಿ ಪರಮಸುಖ ಪಡೆಯುವುದಾದರೆ ದೇವರ ಅಸ್ತಿತ್ವವಾಗಲಿ ಅವನ ಅನುಗ್ರಹವಾಗಲಿ ಅನಗತ್ಯವಲ್ಲವೆ? ಮನುಷ್ಯ ಕರ್ಮ ವೆಸಗಬೇಕು; ಆದರೆ ಅದರ ಫಲವನ್ನು ಈಶ್ವರನಿಗೆ ಬಿಡಬೇಕು. ಹೀಗಾದ ರೇನೆ ಅಹಂಕಾರ ಲಯವಾಗಿ ಮನುಷ್ಯ ಭಗವದನುಗ್ರಹಕ್ಕೆ ಪಾತ್ರನಾಗು ತ್ತಾನೆ. ಇಲ್ಲವಾದರೆ ಆಧ್ಯಾತ್ಮ ಕ್ಷೇತ್ರವೂ ವಿನಿಮಯ ವ್ಯಾಪಾರದ ಮಾರು ಕಟ್ಟೆಯಾಗಿ ಪರಿಣಮಿಸುತ್ತದೆ." ಅನಂತರ ಮುಂದಿನ ಸ್ತೋತ್ರವನ್ನು ಪಠಿಸಿ ದನು:

"ಓ ಭಗವಾನ್, ನೀನು ನನ್ನೊಡನಿರಲು ನನಗೆಲ್ಲವುಂಟು.
ಓ ನನ್ನ ಪ್ರಿಯತಮಾ, ನೀನೆನ್ನ ಸರ್ವನಿಧಿ.
ನಾನು ನಿನ್ನೊಕ್ಕಲಾಗಿರುವನಕ ನನಗುಂಟು ನಿರಾಳ, ತವಾನುಗ್ರಹ.
ನರನ ಕೀರ್ತಿ ಗದ್ದುಗೆಗಳಿಗೆ ನಿನ್ನಿಚ್ಛೆಯೇ ಹರಕೆ.
ನಿನ್ನಿಚ್ಛೆಯಿಂ ನರ ತಿರುಕ, ಚಿರದುಃಖಿ.
ನಿನ್ನಿಚ್ಛೆಯಿಂ ನದಿ ಹರಿಯುವುದು ಮರುಳುಗಾಡಿನಲಿ,
ಮನದ ಬಾನಲಿ ಕಮಲವರಳುವುದು.
ನಿನ್ನಿಚ್ಛೆಯಿಂ ಭವಸಾಗರವ ದಾಟುವೆವು ನಾವು
ನಡು ಹೊಳೆಯಲ್ಲಿ ಮುಳುಗುವೆವು.
ಪರಿಶುದ್ಧ ನೀನು, ಸೌಂದರ್ಯನಿಧಿ ನೀನು,
ನಿನ್ನ ಸ್ತುತಿಯಿಂದೆ ಮನುಜ ನಿರ್ಮಲನಹನು.
ಭಯಂಕರನಂತೆ ಭಯನಾಶನನು ನೀನು.
ಭವಭವದಿ ತೊಳಲಿ ಕಂಗೆಡುತಿಹನು ನರನು.
ಓ ಪ್ರೇಮನಿಧಿ, ನೀನಮೇಯನ್, ನಿರುಪಮನ್, ಅಣೋರಣೀಯನ್
ಮಹತೋಮಹೀಯಾನ್ ಶರಣಪ್ಪೆ ನಿನಗೆ.
ನಿನ್ನ ದರ್ಶನಕಾಗಿ ಹಾತೊರೆವೆ ಸದಾ; ಮತ್ತೊಂದ ಬೇಡೆ ನಿನ್ನಿಂದೆ.

ಪ್ರಸಿದ್ಧ ಪೂರ್ವಿಕನಾದ ಫರೀದ್ ಗಾಂಜ್-ಇ-ಷಕರ್ ಬಾಬಾನಂತೆಯೇ ಷೇಕ್ ಇಬ್ರಾಹಿಮನೂ ಹಲವಾರು ದಿನ ಉಪವಾಸ ಮಾಡುತ್ತಿದ್ದನು. ಅನ್ನ ವ್ಯಸನ ಮೊದಲುಗೊಂಡು ಸಕಲ ಮೋಹಗಳಿಂದ ಪಾರಾಗುವ ಮತ್ತು ಆತ್ಮ ಶ್ರೀಯನ್ನು ಸಂಪಾದಿಸುವ ಸಲುವಾಗಿ ಆಗಾಗ್ಗೆ ಈ ವ್ರತ ನಡೆಸುತ್ತಿದ್ದನು. ಯಾರಾದರೂ ನೈವೇದ್ಯ ತಂದದ್ದಾದರೆ, "ನಾನಾಗಲೆ ಉಂಡಾಗಿದೆ" ಎಂದು ಹೇಳಿ ಬಲುಸಲ ಅದನ್ನು ನಿರಾಕರಿಸುತ್ತಿದ್ದನು. ಒಮ್ಮೆ ಗುರುವಿನ ಮುಂದೆಯೂ ಅಂಥದೊಂದು ಘಟನೆ ನಡೆಯಿತು. ಈ ನಿರಾಕರಣೆಯಿಂದ ರೇಗಿಹೋದ ದಾನಿ "ಪೂರ್ವಿಕರ ನೀತಿಯನ್ನೇ ನೀನು ಅನುಕರಿಸುವೆಯಾ? ರೊಟ್ಟಿಯು ಹುಸಿತೃಪ್ತಿಯಾದರೂ ಉಂಟಾಗಲೆಂದು ಅವರು ಮರದ ರೊಟ್ಟಿಯೊಂದನ್ನು ಹೊಟ್ಟೆಯ ಮೇಲಿಟ್ಟುಕೊಳ್ಳುತ್ತಿದ್ದರು. ಮನಸ್ಸು ಸದಾ ಕಾತರಿಸುತ್ತಿದ್ದರೂ ತಾವು ಉಂಡು ಮುಗಿಸಿದುದಾಗಿ ನಟಿಸುತ್ತಿದ್ದರು" ಎಂದು ಹಂಗಿಸಿದನು. ಈ ಮೂದಲಿಕೆಯಿಂದ ಷೇಕ್ ಇಬ್ರಾಹಿಮನ ಮನಸ್ಸು ಕೊರಗಿ "ನನಗೆ ಮುಂದೇ ನಾಗುತ್ತದೆ? ದಯೆಯಿಟ್ಟು ಹೇಳಿ. ನಾನು ಹಸಿದಿದ್ದರೂ ಊಟ ಪೂರೈಸಿದ್ದು ದಾಗಿ ಜನರಿಗೆ ಸುಳ್ಳು ಹೇಳುತ್ತೇನೆ" ಎಂದು ಗುರುವನ್ನು ಪ್ರಶ್ನಿಸಿದನು.

"ಬದುಕಿನ ಬೇಕುಗಳನ್ನು ಬೇಡವೆನ್ನುವುದು ಪಾಪ. ಯಾರೇ ಆಗಲಿ, ಭೋಗಗಳಿಗಾಗಿ ಬಾಯ್ಬಿಡಬಾರದು. ಆದರೆ ಭಗವಂತನಿಂದ ಬರುವುದನ್ನೆಲ್ಲ ಸೌಜನ್ಯದಿಂದ ಹಾಗೂ ಕೃತಜ್ಞತೆಯೊಡನೆ ಸ್ವೀಕರಿಸಬೇಕು. ಹಸಿವಿನಿಂದ ಪರಮಾನಂದ ಲಭಿಸದು." ಎಂದು ಗುರು ಉತ್ತರಿಸಿ, ತನ್ನ ವಾದದ ಪರವಾಗಿ ಕಬೀರನ ಸೂಕ್ತಿಯನ್ನು ಉದಾಹರಿಸಿದನು: "ಅನ್ನವನ್ನು ತ್ಯಜಿಸಿ, ಭಗ ವಂತನ ಪ್ರೇಮವನ್ನು ಪಡೆದೆನೆಂದು ನಟಿಸುವವನು ಮದುವೆಗೊಂಡ ಹೆಂಡತಿಯ ಉತ್ಕೃಷ್ಟತೆಯನ್ನಾಗಲಿ ಪವಿತ್ರ ವಿಧವೆಯ ಹಿರಿಮೆಯನ್ನಾಗಲಿ ಪಡೆದಿರುವುದಿಲ್ಲ." "ಬಲಿಷ್ಠ ಶರೀರವಿಲ್ಲದೆ ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲಾಗದು. ಅಧ್ಯಾತ್ಮಸಿದ್ಧಿಯ ಮೂಲಮಂತ್ರ ಉಪವಾಸವಲ್ಲ, ಸ್ವಾರ್ಥ ತ್ಯಾಗವಲ್ಲ, ಆತ್ಮಶರಣಾಗತಿ, ತೃಪ್ತಿ, ಮರುಕ ಮತ್ತು ಸವಿನಯುಗಳು."

ಈ ಸಂವಾದದಿಂದ ಷೇಕನಿಗೆ ತುಂಬ ಸಂತುಷ್ಟಿಯಾಯಿತು.

ಇಲ್ಲಿಂದ ಗುರು ಮತ್ತು ಮರ್ದನರು ಸಣ್ಣದೊಂದು ಮರುಭೂಮಿಯ ಮೂಲಕ ಪ್ರವಾಸ ಕೈಗೊಂಡರು. ಅಲ್ಲಿ ತಿನ್ನಲು ಅವರಿಗೇನೂ ಸಿಕ್ಕುತ್ತಿರ

ಲಿಲ್ಲ. ಮರ್ದನ ಬಹು ದುಃಖಿತಪ್ತನಾಗಿ "ನಾನೇನು ಮಾಡಬೇಕು ? ಹೇಳಿ. ನನ್ನನ್ನು ಹಸಿವಿನಿಂದ ಸಾಯಿಸುವುದಿಲ್ಲವೆಂದು ನಂಬಿ ನಿಮ್ಮೊಡನೆ ಬಂದೆ. ಈ ಹಸಿವು ನನ್ನನ್ನು ಕಿತ್ತು ತಿನ್ನುತ್ತಿದೆ. ಹೊಟ್ಟೆ ತುಂಬಿಸಿಕೊಳ್ಳಲು ಏನೂ ಸಿಗದು" ಎಂದು ಗುರುವನ್ನು ಕಾಡಿದನು. ಅವನಿಗೆ ಗುರು ಕೆಲವು ಕಾಡು ಹಣ್ಣುಗಳನ್ನು ತೋರಿಸಿ, ಅವನ್ನು ತಿಂದು ಹಸಿವು ನೀಗಿಕೊಳ್ಳಬಹುದೆಂದೂ, ಆದರೆ ಅವುಗಳನ್ನು ಒಯ್ಯಬಾರದೆಂದೂ ಆಜ್ಞಾಪಿಸಿದನು. ಮರ್ದನ ಕಂಠ ಪೂರ್ತಿ ತಿಂದು ಗುರುವಿನ ಆಜ್ಞೆಯನ್ನುಲ್ಲಂಘಿಸಿ, ಕೆಲವನ್ನು ಕಿಸೆಗಿಳಿಬಿಟ್ಟನು. ಮಾರನೆಯ ಬೆಳಗ್ಗೆ ಹಸಿವೆಯಾದಾಗ ಅವನ್ನು ನಿಶ್ಚಿಂತೆಯಿಂದ ನುಂಗಿದನು. ತುಸುಹೊತ್ತಿನಲ್ಲಿಯೇ ಅವನು ಹೊಟ್ಟೆನೋವಿನ ಸಂಕಟಕ್ಕೊಳಗಾದನು. ಗುರು ಕಾರಣ ವಿಚಾರಿಸಿದಾಗ ಮರ್ದನ ನಡೆದುದೆಲ್ಲವನ್ನು ವಿವರಿಸಿದನು. "ಮರ್ದನ, ಮನುಷ್ಯ ದುಃಖಕ್ಕೆ ಗುರಿಯಾಗುವುದು ಹೀಗೆಯೇ. ಅವನು ಈವೊತ್ತಿಗೆ ಬೇಕಾದ್ದು ಮಾತ್ರವಲ್ಲ, ನಾಳೆಗೆ ಬೇಕಾದ್ದನ್ನೂ ಕಸಿದು ಕೊಳ್ಳಲು ಪ್ರಯತ್ನಿಸುತ್ತಾನೆ. ಅವನು ತನ್ನನ್ನಲ್ಲದೆ ದೇವರನ್ನೂ ನಂಬು ವುದಿಲ್ಲ. ಅವನು ಸಂಗ್ರಹಿಸಿಟ್ಟ ಆಹಾರ, ಕಳ್ಳರ ಪಾಲಾಗದಿದ್ದರೂ, ಹಳಸ ಲಾಗುತ್ತದೆ. ಅಷ್ಟೇ ಅಲ್ಲ, ಆ ಸಂಗ್ರಹ ಇತರರ ಮನಸ್ಸಿನಲ್ಲಿ ಅಸೂಯೆ ಯನ್ನು ಸಂಕಟವನ್ನು ಮೂಡಿಸುತ್ತದೆ. ಆದ್ದರಿಂದ ಯಾರು ಸಂಗ್ರಹಿಸಿಟ್ಟು ಕೊಂಡು ತಿನ್ನುತ್ತಾರೋ ಅವರು ವೇದನೆಯನ್ನನುಭವಿಸಬೇಕಾಗುತ್ತದೆ." ಎಂದು ಗುರು ನಕ್ಕು ನುಡಿದನು. ಮರ್ದನ ಬೇಗನೆ ಆರೋಗ್ಯವುಖನಾಗಿ, ಮನೆಗೆ ಹಿಂದಿರುಗುವ ಅಭೀಷ್ಟವನ್ನು ವ್ಯಕ್ತಪಡಿಸಿದನು : "ನಿಮ್ಮೊಡನಿದ್ದು ಹಸಿವನ್ನು ಹಿಡಿದುಕೊಂಡಿರಲಾರೆ" ಎಂದು ನುಡಿದನು. "ಮರ್ದನ, ನಿನಗೆ ನನ್ನ ಹರಕೆಯಿದೆ. ಇಹಪರಗಳೆರಡರಲ್ಲಿಯೂ ನಿನಗೆ ಮೋಕ್ಷವಿದೆ. ಇತರರು ನನ್ನನ್ನು ಕಂಡುಕೊಳ್ಳುವುದಕ್ಕೆ ಮುಂಚೆಯೇ ನೀನು ನನ್ನನ್ನು ಕಂಡು ಕೊಂಡು ಶ್ರದ್ಧೆಯಿಂದ ಶುಶ್ರೂಷೆಗೈದಿದ್ದೀಯೆ. ನನ್ನ ಪ್ರಾಣಕ್ಕಿಂತ ಮಿಗಿ ಲಾಗಿ ನಾನಿದಕ್ಕೆ ಬೆಲೆಕೊಡುತ್ತೇನೆ. ನೀನೀಗ ನೆಮ್ಮದಿಯಿಂದ ಮನೆಗೆ ಹಿಂದಿರುಗಬಹುದು" ಎಂದು ಗುರು ಅವನನ್ನು ಸಮಾಧಾನಪಡಿಸಿದನು. ಮರ್ದನ ಗುರುವಿನ ಪಾದವನ್ನು ಮುಟ್ಟಿದನು. ನಾನಕ್ ಅವನನ್ನು ಬಿಗಿ ಗುಪ್ಪಿಕೊಂಡು, ಆನಂದಪುಳಕಿತನಾಗಿ "ನೀನು ಮುಂದೆ ನಡೆ. ನಾನು

ನಿನ್ನನ್ನು ಹಿಂಬಾಲಿಸುತ್ತೇನೆ. ಆದರೆ ನನ್ನ ಗೊತ್ತುಗುರಿಗಳನ್ನು ಯಾರೊಡನೆಯೂ ಹೇಳಬೇಡ" ಎಂದು ಅವನನ್ನು ಬೀಳ್ಕೊಂಡನು.

ಮರ್ದನ ತಾಳ್ವಂಡಿಯನ್ನು ತಲುಪಿದಾಗ ನಾನಕನ ತಾಯಿ "ನನ್ನ ಮಗನನ್ನೆಲ್ಲಿ ಬಿಟ್ಟೆ ? ಮತ್ತೆ ಅವನ ಮುಖ ಕಾಣುವುದೆಂದು ?" ಎಂಬುದಾಗಿ ಭಾವೋದ್ವಿಗ್ನಳಾಗಿ ಗದ್ಗದಿಸಿದಳು. ಮರ್ದನ ತುಟಿಪಿಟಿಕ್ಕೆನ್ನಲಿಲ್ಲ; ತನ್ನ ಜನರನ್ನೆಲ್ಲ ಸಂಧಿಸಿ ಮಾತಾಡಿಸಿ, ಮತ್ತೆ ಕಾಲ್ತೆಗೆದನು.

ಅವನಷ್ಟು ಬೇಗ ಹಿಂದಿರುಗಬೇಕಾದರೆ ಮಗನ ಆದೇಶ ಕಾರಣವಾಗಿರಬೇಕೆಂದೂ, ಅವನು ಅಲ್ಲೆಲ್ಲೋ ಹತ್ತಿರವಿರಬೇಕೆಂದೂ ಊಹಿಸಿಕೊಂಡು ನಾನಕನ ತಾಯಿ ಮರ್ದನನನ್ನು ಹಿಂಬಾಲಿಸಿದಳು. ಮೂರು ಮೈಲಿ ಸಾಗಿದ ನಂತರ ಅವನು ನಿಂತನು. ಅನೇಕ ವರ್ಷಗಳನಂತರ ಮಗನನ್ನು ಮುಖಾಮುಖಿಯಾಗಿ ಕಂಡ ತಾಯಿ ಆನಂದಪರವಶಳಾದಳು. ತಾಯಿ ದಿಟ್ಟಿಗೆ ಬಿದ್ದಕೂಡಲೆ ನಾನಕ್ ಮುನ್ನುಗ್ಗಿ ಅವಳ ಪಾದವನ್ನು ಮುಟ್ಟಿದನು. ತಾಯಿ ಮಗನನ್ನು ಆಲಿಂಗಿಸಿಕೊಂಡು, ಹಣೆಸವರಿ, ಮುತ್ತಿಟ್ಟು "ನಿನ್ನದು ಮಹತ್ತರವಾದ ತ್ಯಾಗ, ಕಂದ. ನೀನು ನಡೆದ ನೆಲ ಪಾವನ, ನೀನು ಸಂಧಿಸಿದ ಜನ ಪುಣ್ಯರು, ನಿನ್ನನ್ನು ಪಡೆದ ತಾಯಿ ಧನ್ಯೆ. ಭಗವಂತನ ಅನುಗ್ರಹದಿಂದ ನಾನು ನಿನ್ನನ್ನು ಮತ್ತೆ ನೋಡುವಂತಾಗಿದೆ" ಎಂದು ಬಿಕ್ಕಿ ಬಿಕ್ಕಿ ಅತ್ತಳು.

ನಾನಕ್ ಸಹ ಭಾವೋದ್ವಿಗ್ನನಾದನು. ತಾಯಿ ಅವನಿಗೆ ಸಿಹಿತಿಂಡಿ ನಿವೇದಿಸಿದಳು. ತನಗಾಗಲೆ ತೃಪ್ತಿಯಾಗಿದೆಯೆಂದು ನಾನಕ್ ನುಡಿದನು. "ಯಾವಾಗ, ಏನು ತಿಂದೆ ?" ಎಂದು ತಾಯಿ ಕೇಳಿದಳು. ಮರ್ದನನಿಗೆ ರಿಬೆಕ್ ನುಡಿಸುವಂತೆ ಹೇಳಿ ನಾನಕ್ ಸ್ತೋತ್ರವೊಂದನ್ನು ಹಾಡಿದನು: "ಭಗವಂತನನ್ನು ನಂಬಿದವನು ಎಲ್ಲ ಬಗೆಯ ಸಿಹಿಯನ್ನು ಸವಿಯುತ್ತಾನೆ; ಅವನ ವಾಣಿಯನ್ನು ಕೇಳಿದವನು ಉಪ್ಪು ರುಚಿನೋಡುತ್ತಾನೆ; ಅವನ ನಾಮಸ್ಮರಣೆ ಮಾಡಿದವನು ಹುಳಿತಿಂಡಿಗಳನ್ನು ಅನುಭವಿಸುತ್ತಾನೆ; ಅವನ ಗುಣಗಾನ ಮಾಡಿದವನು ಎಲ್ಲ ಮಸಾಲೆಗಳನ್ನು ಚಪ್ಪರಿಸುತ್ತಾನೆ. ಭಗವಂತನನ್ನು ಶ್ರದ್ಧೆಯಿಂದ ಪ್ರೇಮಿಸಿ, ಆ ಪ್ರೇಮವನ್ನು ಭಗವಂತ ಒಪ್ಪಿಸಿಕೊಂಡಾಗ, ನಾಲಗೆಗೆ ಹಿತವಾದ ಮೂವತ್ತಾರು ರಸಗಳೂ ಭಕ್ತನಿಗೆ ವಶ

ವಾಗುತ್ತವೆ. ಉಳಿದ ರಸಗಳೆಲ್ಲ ವ್ಯರ್ಥ, ತಾಯಿ. ಅವು ಮನಸ್ಸಿಗೆ ಕೆಡು
ಕನ್ನೂ, ಮೈಗೆ ನೋವನ್ನೂ ತರುತ್ತವೆ."

"ಮಗನೆ, ನೀನು ಹಾಕಿಕೊಂಡಿರುವ ಭಿಕಾರಿಯ ಕಂತೆಯನ್ನೊಗೆದು
ನಾನು ತಂದಿರುವ ಬಟ್ಟೆಗಳನ್ನು ತೊಟ್ಟುಕೊ" ಎಂದು ತಾಯಿ ಹಲವರಿದಳು.
ಭಗವಂತನ ಪ್ರೇಮರಾಗದಲ್ಲಿ ನೆನೆದಿರುವ ಪುಣ್ಯಪುರುಷನಿಗೆ ಮಾತ್ರ ಕಾವಿ
ಯುಡುಪಿನ ಆನಂದ ಲಭಿಸುತ್ತದೆ; ಧವಳ ವಸ್ತ್ರವನ್ನು ಧರಿಸುವ ಪುಣ್ಯ
ಸತ್ಯವಂತನಿಗೆ ಹಾಗೂ ತ್ಯಾಗನಿಷ್ಠನಿಗೆ ಸಲ್ಲುತ್ತದೆ; ನೀಲಿ ವಸ್ತ್ರವನ್ನು ಧರಿ
ಸುವ ನಲಿವು ದುರ್ಗುಣಗಳ ಕರೆಯಿಂದ ಮುಕ್ತನಾದವನಿಗೆ ಲಭಿಸುತ್ತದೆ;
ಬೆಚ್ಚನೆಯ ಚಪ್ಪಲಿ ಧರಿಸುವ ಲಭ್ಯ ಭಗವಂತನ ಮುಂದೆ ಚಿರಕಾಲ ನಿಲ್ಲು
ವಂಥವನಿಗೆ ದೊರಕೊಳ್ಳುತ್ತದೆ" ಎಂದು ನಾನಕ್ ಉತ್ತರಿಸಿದನು.

ಅಷ್ಟರಲ್ಲಿ ನಾನಕನ ಆಗಮನದ ವಾಸನೆ ತಂದೆಗೆ ತಿಳಿಯಿತು; ಕೂಡಲೆ
ಅವನು ಕುದುರೆಯೇರಿ ಮಗನಿದ್ದಲ್ಲಿಗೆ ಹೊರಟನು. ಮಗನ ಫಕೀರಿವೇಷವನ್ನು
ನೋಡಿ "ಮಗು ನಿನ್ನ ಅವಸ್ಥೆಯನ್ನು ನೋಡಿ ಸಂಕಟವಾಗಿದೆ. ಮಾನಿಷ್ಠ
ಗೃಹಸ್ಥನ ಮಗ ಬೀದಿಯ ಭಿಕಾರಿಯಾಗಿ ಸುತ್ತಾಡಬಹುದೆ? ಕುದುರೆಯೇರಿ
ಮನೆಗೆ ಹಿಂತಿರುಗು" ಎಂದನು. ನಾನಕ್ ತಂದೆಯ ಚರಣಗಳಿಗೆರಗಿ
"ಅಪ್ಪ, ಕುದುರೆಗಳಿಂದ ನನಗೆ ಪ್ರಯೋಜನವಿಲ್ಲ. ತನ್ನ ದಾರಿ ತಿಳಿದವನು
ಮತ್ತೊಬ್ಬನ ದಾರಿ ಹಿಡಿಯುವುದಿಲ್ಲ. ಪರಮಾತ್ಮ ಜ್ಯೋತಿಯಲ್ಲಿ
ಯಾರು ತನ್ನ ಆತ್ಮದ ಹಣತೆಯನ್ನು ಹೊತ್ತಿಸಿಕೊಂಡಿರುವನೋ ಅಂಥವನು
ಭಗವದನುಗ್ರಹದಿಂದ ಜಗತ್ತಿನ ಸಮ್ರಾಟನಾದಂತೆ ಭಾವಿಸುತ್ತಾನೆ"
ಎಂದು ನುಡಿದನು. ಕೆಲವು ದಿನ ಕುಟುಂಬದೊಡನಿದ್ದು, ತನ್ನ ಜನರ
ಜೊತೆಯಲ್ಲಿ ಕಾಲಕಳೆದು, ಹೆಣದೇಹವನ್ನು ಗುಣಪಡಿಸಿಕೊಂಡು ಬರುವು
ದೆಂದು ಕಾಲು ಒತ್ತಾಯಪಡಿಸಿದನು. "ಭಗವನ್ನಾಮಸ್ಮರಣೆಯ ಸಂತೋಷವೇ
ನನ್ನ ಮನೆ; ಭಗವದನುಗ್ರಹವೇ ನನ್ನ ಕುಟುಂಬ. ನನ್ನೊಡೆಯನ ಆಣತಿಗೆ
ಮಾತ್ರ ನಾನು ತಲೆಬಾಗುತ್ತೇನೆ" ಎಂದು ನಾನಕ್ ಸ್ಪಷ್ಟಪಡಿಸಿದನು.

ಈ ಮಾತುಗಳಿಂದ ಕಾಲು ತುಂಬ ವ್ಯಾಕುಲಗೊಂಡು "ನಿನ್ನ ನಿರಾಶೆಯ
ಕಾರಣ ನನಗೆ ತಿಳಿದಿದ್ದರೆ ಅದಕ್ಕೆ ಉಪಾಯ ಹುಡುಕುತ್ತಿದ್ದೆ. ನಿನಗೆ
ಮತ್ತೊಂದು ಹೆಣ್ಣು ಬೇಕಿದ್ದರೆ ಮದುವೆ ಮಾಡಿಸುತ್ತಿದ್ದೆ; ಮತ್ತೊಂದು

ಮನೆ ಬೇಕಿದ್ದರೆ ಕಟ್ಟಿಸಿಕೊಡುತ್ತಿದ್ದೆ" ಎಂದು ನುಡಿದನು. "ದೇವರೊಂದಿಗೆ ನನಗೆ ಮದುವೆಯಾಗಿದೆ. ಪ್ರಪಂಚದ ಪ್ರತಿಯೊಂದು ವ್ಯಕ್ತಿಗೂ ಕೆಲಸ ನಿಯಮಿಸುವವನು ಅವನು. ನನಗೆ ಕರ್ತವ್ಯ ವಿಧಿಸುವವನೂ ಅವನೆ." ಎಂದು ಉತ್ತರಿಸಿ, ಅಲ್ಲಿಂದ ಮುಂದೆ ತೆರಳುವುದಕ್ಕೆ ತನ್ನ ತಂದೆ ತಾಯಿಯರ ಅನುಮತಿಯನ್ನು ಬೇಡಿದನು: "ನಿಮಗೆ ಮತ್ತೆ ಮುಖ ತೋರಿಸುತ್ತೇನೆಂದು ವಾಗ್ದಾನ ಮಾಡಿದ್ದೆ. ಆ ವಾಗ್ದಾನ ನೆರವೇರಿಸಿದ್ದೇನೆ. ಈಶ್ವರೇಚ್ಛೆಯಂತೆ ನಡೆಯಲು ನನಗೆ ದಯೆಯಿಟ್ಟು ಅವಕಾಶಕೊಡಿ" ಎಂದು ನಾನಕ್ ಅವರನ್ನು ಪ್ರಾರ್ಥಿಸಿದನು. ಹೆಚ್ಚು ಚರ್ಚೆಯಿಂದ ಪ್ರಯೋಜನವಿಲ್ಲವೆಂದು ತಿಳಿದು ಅವನ ತಂದೆ ತಾಯಿಯರು ದುಃಖಭಾರದಿಂದ ಮರಳಿದರು.

ಮತ್ತೊಮ್ಮೆ ಷೇಕ್ ಇಬ್ರಾಹಿಮನನ್ನು ನೋಡುವ ಸಲುವಾಗಿ ಗುರು ಪಾಕ್ ಪಟ್ಟಣಕ್ಕೆ ಹೋದನು. ಗುರು ಮರ್ದನನೊಡನೆ ಊರಿನ ಹೊರಗೆ ಕುಳಿತು ಹಾಡತೊಡಗಿದನು: "ಓ ಭಗವಾನ್, ನೀನೆ ಫಲಕ, ನೀನೆ ಲೇಖನಿ, ನೀನೆ ಬರವಣಿಗೆ. ನೀನೊಬ್ಬನೇ ನನ್ನೊಡೆಯ. ಆದ್ದರಿಂದ ಮತ್ತೊಬ್ಬರನ್ನೇಂತು ನೆನೆಯಲಿ?" ಷೇಕ್ ಇಬ್ರಾಹಿಮನ ಶಿಷ್ಯನೊಬ್ಬ ಈ ಹಾಡನ್ನು ಕೇಳಿ, ನಾನಕ್ ಮತ್ತೆ ಬಂದಿದ್ದ ಸುದ್ದಿಯನ್ನು ಮುಟ್ಟಿಸಿದನು. ಷೇಕ್ ಇಬ್ರಾಹಿಮ್ ಅವನ ಬಳಿ ಹೋಗಿ, ಗೌರವ ಸಲ್ಲಿಸಿ, ಸ್ವಾಗತನೀಡಿ "ನಾನಕ್, ದೇವರೊಬ್ಬನೆಂದು ನೀನು ಹೇಳುತ್ತೀಯೆ. ನಿಜವೆಂದೊಪ್ಪಿಕೊಳ್ಳೋಣ. ಆದರೆ ದಾರಿ ಎರಡಿವೆ. ಯಾವುದನ್ನು ಅನುಸರಿಸೋಣ. ಯಾವುದನ್ನು ಬಿಡೋಣ" ಎಂದು ಪ್ರಶ್ನಿಸಿದನು. "ಒಬ್ಬನೇ ದೇವರೆಂದು ಒಪ್ಪಿಗೆಯಾದರೆ, ಸಾಕ್ಷಾತ್ಕಾರ ಮಾರ್ಗವೂ ಒಂದೆಯಾಗುತ್ತದೆ. ಶಿವಪಥವೊಂದೆ ಹೊರತು ಎರಡಿಲ್ಲ. ಅದನ್ನು ಮಾತ್ರ ಸ್ವೀಕರಿಸಿ, ಮತ್ತೊಂದನ್ನು ಬಿಟ್ಟುಬಿಡಬೇಕು. ಹುಟ್ಟುಸಾವುಳ್ಳವನನ್ನು ಪೂಜಿಸಬೇಡ ; ಶಾಶ್ವತನೂ ಸರ್ವವ್ಯಾಪಿಯೂ ಆದ ಭಗವಂತನನ್ನು ಮಾತ್ರ ಧ್ಯಾನಿಸು" ಎಂದು ಗುರು ಬೋಧಿಸಿದನು.

ಪ್ರಪಂಚವನ್ನು ತ್ಯಜಿಸದೆ ಮನುಷ್ಯನಿಗೆ ಮುಕ್ತಿಯಿಲ್ಲವೆಂಬ ಫಕೀರುದ್ದೀನ್ ಗಾಂಜ್-ಇ-ಷಕರ್‌ನ ಉಪದೇಶವನ್ನು ಇಬ್ರಾಹಿಮ್ ಉದ್ಧರಿಸಿ ಹೇಳಿದನು. ಮನುಷ್ಯ ಎಲ್ಲಿಯೇ ಇರಲಿ, ಅವನ ಮನಸ್ಸು ಪರಿಶುದ್ಧವಾಗಿರುವುದಾದರೆ ಭಗವತ್‌ಸಾಕ್ಷಾತ್ಕಾರ ಸುಲಭಸಾಧ್ಯವೆಂದು ನಾನಕ್ ಉತ್ತರಿಸಿದನು.

"ಭಗವಂತನ ಹೃದಯವನ್ನು ಸೂರೆಗೊಳ್ಳುವ ಶಬ್ದ ಯಾವುದು? ಶೀಲ ಯಾವುದು? ಮೋಡಿ ಯಾವುದು?" ಎಂದು ಷೇಕ್ ಪ್ರಶ್ನಿಸಿದನು. "ವಿನಯವೇ ಶಬ್ದ, ಸಹನೆಯೇ ಶೀಲ, ಸಭ್ಯತೆಯೇ ಮೋಡಿ. ಇವು ಮಾತ್ರ ನನ್ನೊಡೆಯನ ಹೃದಯವನ್ನು ಸೆಳೆಯುತ್ತವೆ." "ಇತರರ ರಕ್ತದಿಂದ ಬದುಕುವ ಪ್ರಾಪಂಚಿಕ ಭಗವಂತನ ಪ್ರೇಮಕ್ಕೆ ಪಾತ್ರನಾಗುತ್ತಾನೆಯೆ?" "ಹಿರಿತನದ ಕೋಶದಲ್ಲಿ ಸತ್ಯದ ಕತ್ತಿಯನ್ನಿರಿಸಿ, ಅದರಿಂದ ತನ್ನ ಕೊರಳನ್ನು ಕತ್ತರಿಸಿಕೊಂಡದ್ದಾದರೆ ಲೋಭದ ರಕ್ತ ಹರಿದು, ಭಗವದನು ಗ್ರಹಕ್ಕೆ ಪಾತ್ರನಾಗುತ್ತಾನೆ." "ಭಗವತ್ಸಾಕ್ಷಾತ್ಕಾರಕ್ಕೆ ನಡುವಣಗಾರನ ಅವಶ್ಯಕತೆಯಿದೆಯೆ?" "ಪರಿಶುದ್ಧಾತ್ಮವೇ ನಡುವಣಗಾರ. ದೇವರೇ ಗುರು. ಅವನಿಗೆ ಶರಣಾದ ಆತ್ಮ ಅವನಂತೆಯೆ ಆಗುತ್ತದೆ." ಅನಂತರ ತನ್ನನ್ನು ಆಶೀರ್ವದಿಸಬೇಕೆಂದು ಷೇಕ್ ಕೇಳಿಕೊಂಡನು. "ನಿನ್ನ ಮೇಲೆ ಭಗವದನು ಗ್ರಹವಿದೆ. ನಿನ್ನ ಸರಕು ಸುಖವಾಗಿ ಮನೆ ತಲುಪುತ್ತವೆ" ಎಂದು ನಾನಕ್ ಹರಸಿದನು. ಅವನ ಶ್ರದ್ಧಾಭಕ್ತಿ ಭಗವಂತನಿಗೆ ಸಮ್ಮತವೆಂಬುದೇ ಆ ಹರಕೆಯ ತಿರುಳಾಗಿತ್ತು.

ದಾರಿಯಲ್ಲಿ ಗುರುವಿಗೆದುರಾದ ಸನ್ಯಾಸಿಯೊಬ್ಬ ತ್ಯಾಗದ ಲಕ್ಷಣವೇನೆಂದು ಪ್ರಶ್ನಿಸಿದನು? "ಯಾವುದನ್ನೂ ತನ್ನದೆಂದು ತಿಳಿಯದೆ, ಲಭ್ಯವಾದದ್ದನ್ನೆಲ್ಲ ಮಿತವಾಗಿ ಬಳಸಿಕೊಂಡವನು ಪ್ರಪಂಚವನ್ನು ತ್ಯಜಿಸಿದಂತಾಗುತ್ತದೆ. ಅಂಥವನು ದೇವರನ್ನು ಸೇರುತ್ತಾನೆ" ಎಂದು ನಾನಕ್ ಉತ್ತರಿಸಿದನು.

ಗೋವಿಂದವಾಲದಲ್ಲಿ ಗುರು ಊರವರ ಬಹಿಷ್ಕಾರಕ್ಕೆ ಗುರಿಯಾಗಿ ಊರಾಚೆ ವಾಸಿಸುತ್ತಿದ್ದ ಕುಷ್ಠರೋಗಿಯ ಮನೆಗೆ ಹೋದನು. ದಾರುಣಾವಸ್ಥೆಯಲ್ಲಿದ್ದ ಆ ರೋಗಿಯ ಶುಶ್ರೂಷೆಯಲ್ಲಿ ನಾನಕ್ ಕೆಲವು ಕಾಲ ಕಳೆದನು. "ಓ ಗುರುವೆ, ಮನುಷ್ಯನಿಗೆ ರೋಗ ಹೇಗೆ ತಗಲುತ್ತದೆ?" ಎಂದು ರೋಗಿ ಪ್ರಶ್ನಿಸಿದನು. "ದೇವರನ್ನು ಮರೆಯುವುದರಿಂದ. ನಿಜಕ್ಕೂ ರೋಗ ಆತ್ಮ ಸಂಬಂಧಿಯೇ ಹೊರತು ದೇಹಸಂಬಂಧಿಯಲ್ಲ. ದೇಹದ ಜಾಡ್ಯಕ್ಕೆ ಮನುಷ್ಯ ಮದ್ದು ಮಾಡಬಲ್ಲ; ಆದರೆ ಆತ್ಮಸಂಬಂಧವಾದ ರೋಗಗಳನ್ನು ಭಗವಂತ ಮಾತ್ರ ಪರಿಹರಿಸಬಲ್ಲನು. ಆತ್ಮಾರೋಗ್ಯವುಳ್ಳವನು ಶರೀರಬಾಧೆಯನ್ನು ಲೆಕ್ಕಿಸುವುದಿಲ್ಲ. ಆದರೆ ಕೇವಲ ಶರೀರವನ್ನು ನಂಬಿಕೊಂಡವನ ಆತ್ಮ ಸದಾ ದುಃಖ

ಭಾಜನವಾಗುತ್ತದೆ” ಎಂದು ಗುರು ಉಪದೇಶಿಸಿದನು. ಆ ಕೂಡಲೆ ಕುಷ್ಠ ರೋಗಿ ಗುಣಮುಖನಾಗಿ ಭಗವದ್ಭಕ್ತನಾದನಂತೆ.

# ೫

"ತನ್ನ ಸಂಕಲ್ಪಸಾಧನೆಗಾಗಿ ಭಗವಂತ ಜಗತ್ತನ್ನು ಸೃಷ್ಟಿಸಿದ್ದಾನೆ."
—ಗುರು ನಾನಕ್

ಪಂಜಾಬಿನ ಮಧ್ಯಭಾಗದಲ್ಲಿ ಪರ್ಯಟನೆ ಮಾಡುತ್ತ, ನಾನಕ್ ಸಯ್ಯದ್ ಪುರ ಸೇರಿ, ತನ್ನ ಶಿಷ್ಯ ಭಾಯಿ ಲಾಲೋವನ್ನು ಎರಡನೆಯ ಬಾರಿ ಸಂಧಿಸಿದನು. ಪಠಾಣ್ ದೊರೆಗಳ ಚಿತ್ರಹಿಂಸೆಯ ಕಥೆಯನ್ನು ಲಾಲೊ ಗುರುವಿಗೆ ವಿವರಿಸಿದನು. "ಮನುಷ್ಯರಿಂದಾಗಲಿ ರಾಷ್ಟ್ರಗಳಿಂದಾಗಲಿ ಒಳ್ಳೆಯತನ ಮಾಯವಾದಾಗ, ಅವರು ಅಥವಾ ಅವು ತಪ್ಪದೆ ದುಃಖಕ್ಕೆ ಗುರಿಯಾಗುತ್ತವೆ. ಪಠಾಣರ ಆಡಳಿತದ ಅಂತ್ಯ ಸನ್ನಿಹಿತವಾಗಿದೆ" ಎಂದು ನಾನಕ್ ಅವನನ್ನು ಸಮಾಧಾನಪಡಿಸಿದನು. ಬಾಬರ್ ದಂಡೆತ್ತಿ ಬಂದು, ಪಂಜಾಬಿನಲ್ಲಿ ಘೋರ ಕಾಳಗ ನಡೆಸಿ, ದೆಹಲಿಯ ಸಿಂಹಾಸನವನ್ನು ಆಕ್ರಮಿಸಿಕೊಳ್ಳುವುದಾಗಿ ಗುರು ಭವಿಷ್ಯ ನುಡಿದನು. ಲಾಲೋವನ್ನು ಸಂಬೋಧಿಸಿ ಹಾಡಿದ ಮುಂದಿನ ಹಾಡಿನಲ್ಲಿ ಆ ಭವಿಷ್ಯದ ಸೂಚನೆಯಿದೆ:

"ಓ ಲಾಲೊ, ಬಂದದ್ದು ಬಂದಂತೆ ದೈವವಾಣಿಯನು ನುಡಿಯುವೆನು.
ಪಾಪದ ಮದುವೆ ಮೆರವಣಿಗೆ ನಡೆದಿದೆ; ಬಾಬರ್ ಧಾಳಿ ನಡೆಸಿ,
ಖಡ್ಗದ ಮೊನೆತೋರಿ (ಮಾತೃಭೂಮಿಯ) ಪಾಣಿಗ್ರಹಣಕ್ಕಾಗಿ ಕೈ ಚಾಚಿಹನು.
ಮತ ಮಾತ್ರವಲ್ಲ, ಲಜ್ಜೆಯನು ಸಹ ಜನ ಕಳೆದುಕೊಂಡಿಹರು; ಮಿಥ್ಯೆ
ಸರ್ವತ್ರ ತಾಂಡವವಾಡಿಹುದು.
ಮದುವೆ ನಡೆಸುವವರು ಹಾರುವರಲ್ಲ, ಕಾಜಿಗಳಲ್ಲ, ಭೂತಾವತಾರಿ
ಗಳು.
ಹಿಂದು ಮುಸ್ಲಿಮ್ ಹೆಂಗಸರು ದುಃಖದಿಂ ಸೋಬಾನೆ ಹಾಡಿಹರು.
ಹಂತಕರ ಕುರಿತು ಹಾಡಿಹುದು ಮಂದಿ; ರಕ್ತಕೇಸರಿಯ ಹಚ್ಚಿಹರವರ

ಹಣೆಗೆ. ನರಸಂತತಿಯು  ನಗರದಲಿ ದೇವಭಜನೆಯ ಮಾಡಿಹನು
ನಾನಕನು.

ಸತ್ಯವಾನ್ ನ್ಯಾಯದರ್ಶಿಯು, ನರರ ಕರ್ತವ್ಯಗಳ ನಿಯಂತೃ ಆ ದೇವ
   ದೂರದೊಳು ನಿಂತು ನೋಡುತಿರುವನು ನಮ್ಮ ಆಟಪಾಟಗಳ.
ಮಮದೇಹಗಳು ಚೂರು ಚೂರಾಗುವುವು; ತದನಂತರವೆ ತಿಳಿಯುವುದು
   ನನ್ನ ಮಾತಿನ ತಿರುಳು, ಭಾರತೀಯರಿಗೆ.

ಮುಂದೆ ಕೆಲವು ದಿನಗಳಲ್ಲಿಯೇ ಬಾಬರ್ ಆ ಊರನ್ನು ಮುತ್ತಿ, ಕೊಳ್ಳೆ ಹೊಡೆದು, ಅನೇಕರನ್ನು ಕೊಂದು, ನಾನಕ್ ಮರ್ದನ ಮೊದಲಾದವರನ್ನು ಸೆರೆಹಿಡಿದನು. ಗುರು ತಲೆಯಮೇಲೆ ಭಾರಿ ಹೇರನ್ನು ಹೊರಬೇಕಾಯಿತು; ಮರ್ದನ ಆಳಾಗಿ ದುಡಿಯಬೇಕಾಯಿತು. ಅನಂತರ ನಾನಕ್ ಕೈಮಿಲ್ಲಿನಲ್ಲಿ ಧಾನ್ಯ ಬೀಸಬೇಕಾಯಿತು. ದುಡಿಯುತ್ತ ದುಡಿಯುತ್ತ ಇತರ ಖೈದಿಗಳು ನರಳಿ ನರಳಿ ಅರಚಿಕೊಂಡರೆ ನಾನಕ್ ಭಗವಂತನ[1] ಸ್ತೋತ್ರ ಹಾಡುತ್ತಿದ್ದನು:

"ಓ ಭಗವಾನ್, ನಾ ನಿನ್ನ ದಾಸ: ಪುಣ್ಯಾತ್ಮ ನಾನು
ನಿನ್ನಂಗಡಿಗೆ ಕೈ ಹಿಡಿದು ಕರೆತಂದೆ ಹರಕೆ ನುಡಿದೆ
ನಿನ್ನಿಚ್ಛೆಯಂತೆ ನಾ ದುಡಿವೆನೀಗ.
ದಾಸನಹ ನನಗೆ ನಿನ್ನ ಬಳಿ ಸಲ್ಲುವುದೆ ಯುಕ್ತಿ ?
ಏಕೆಂದು ಪ್ರಶ್ನಿಸದೆ ನಿನ್ನ ಸಂಕಲ್ಪಕ್ಕೆ ತಲೆಬಾಗುವುದೆ ಪರಮ  ಪಥ;
   ಅನ್ಯ ಪಥವಿಲ್ಲ.
ಓ ನನ್ನ ಪ್ರೇಮನಿಧಿ, ನಿನಗೆ ದಾಸರು ನನ್ನ ತಂದೆತಾಯಿ ಸಹ:
   ಆ ನಿನ್ನ ದಾಸರ ಮೊಳಕೆ ನಾನು.
ಕುಣಿಯುತಿರೆ ತಾಯಿ, ಹಾಡುತಿರೆ ತಂದೆ, ಭಕ್ತಿ ಕುಸುಮವನರ್ಪಿಸುವೆ
   ನಿನಗೆ.

[1] ನಾನಕನ ಹೊರೆ ಅವನ ತಲೆಯ ಮೇಲೆ ಕೂತಿರದೆ ಆಕಾಶದಲ್ಲಿ ನೇತಾಡುತ್ತಿತ್ತೆಂದೂ, ಅವನು ಕೈ ಹಾಕದೆಯೆ ಕೈಮಿಲ್ಲು ನಡೆಯುತ್ತಿತ್ತೆಂದೂ, ನಾನಕ್ ಮಾತ್ರ ಸಮಾಧಿಮಗ್ನನಾಗಿಯೋ ಆನಂದನರ್ತನದಲ್ಲಿ ಮಗ್ನನಾಗಿಯೋ ಇರುತ್ತಿದ್ದನೆಂದೂ, ಅದನ್ನೆಲ್ಲ ಖೈದಿಗಳು ಕಂಡಿದ್ದುದಾಗಿ ಶ್ರದ್ಧಾವಂತ ಭಕ್ತರು ಹೇಳಿಕೊಳ್ಳುತ್ತಾರೆ.

ಓ ದೊರೆಯೆ, ನೀರಡಿಕೆಯಾಗೆ ನೀರು ತಹೆ ನಿನಗಾಗಿ, ಧಾನ್ಯ
ಬೀಸುವೆ ನಿನಗೆ ಹಸಿವಾಗೆ.
ಬೀಸಣಿಗೆ ಸೇವೆ ನಡಸುವೆ ನಿನಗೆ, ಅಡಿಯೊತ್ತುವೆನು ನಿನ್ನ, ಸದಾ
ಜಪಿಸುವೆನು ನಿನ್ನ ಹೆಸರ.
ನೀ ಕೊಟ್ಟ ಉಪ್ಪಿಗೆ ದ್ರೋಹ ಬಗೆದಿದ್ದೇನೆ, ಆದರುಂ ಕ್ಷಮಿಸಿ
ಹರಸಿಹೆ ಜಯವ.
ಸದಾ ಕಾರುಣ್ಯನಿಧಿ, ಮಹಾದಾನಿ ಅನಾದಿಕಾಲದಿಂ ನೀನಲ್ಲದಿಲ್ಲ
ಬಿಡುಗಡೆ ನರಗೆ."

ತನಗೆ ವಹಿಸಿದ ಕೆಲಸವನ್ನು ದುಡಿಯುವಾಗಲೆ ಫಕೀರ ಆನಂದಪರವಶ ನಾಗಿ ಕುಣಿಯುತ್ತಿದ್ದನೆಂಬ ಸುದ್ದಿ ಸೇನಾಧಿಪತಿ ಮೀರ್‌ಖಾನನಿಗೆ ವರದಿ ಯಾಯಿತು. ಸೇನಾಧಿಪತಿ ಆ ಸುದ್ದಿಯನ್ನು ಬಾಬರನಿಗೆ ಮುಟ್ಟಿಸಿದನು. ಫಕೀರನನ್ನು ತನ್ನಲ್ಲಿಗೆ ಕರೆತರಬೇಕೆಂದು ದೊರೆ ಆಜ್ಞಾಪಿಸಿದನು; ಅಂಥ ಮಹಿಮನನ್ನು ಕಷ್ಟಕ್ಕೀಡುಮಾಡಿದ್ದಕ್ಕಾಗಿ ಪಶ್ಚಾತ್ತಾಪಗೊಂಡನು. ನಾನಕ್ ತನ್ನ ಮುಂದೆ ನಿಂತಾಗ, ಬಾಬರ್ ಅವನ ಕ್ಷಮಾಪಣೆ ಕೇಳಿದನು. ಆಗ ನಾನಕನ ಬಾಯಿಂದ ಹಾಡು ಹರಿಯಿತು :

ನಿಗನಿಗನೆ ಹೊಳೆದುವವರ ಜಡೆ ಹಿಂದೆ, ಕುಂಕುಮದ ಸಾಲು ಹರಿ
ದಿತ್ತು ಬೈತಲೆಯಲ್ಲಿ
ಆ ಜಡೆಯ ಕತ್ತರಿಸಿ, ಧೂಳಡಕಿದರು ತಲೆಗೆ,
ಸಾಮಾನ್ಯ ಜನದಲಿ ಚೋಟುನೆಲ ಸಿಗದಿದೆ ಅರಮನೆಯೆ
ಮನೆಯಾದವರಿಗೊಮ್ಮೆ.
ನಿನಗಿದೋ ಜಯಮಕ್ಕೆ ಭಗವಾನ್
ಓ ಸನಾತನ ಪ್ರಭುವೆ, ಅರಿಯರು ನಿನ್ನಿತಿಮಿತಿಯನಾರೂ
ನೀನೋ ಅನಂತವೇಷಿ, ಕಾಮರೂಪಿ.
ಜನರನು ಮರುಳುಗೊಳಿಸುವ ಶ್ರೀ ಸೌಂದರ್ಯಗಳೆ
ಆಗಿಹುವು ಇಂದವರ ಶತ್ರುಗಳು.

ಮುಂದಿನದ ಯೋಚಿಸುವ ಮಾನವಗೆ
ಸಮನಿಸದು ದುಃಖ ಸಂದೇಹವೆಂದು.

ಅನಂತರ ಬಾಬರ್ ಪ್ರಶ್ನಿಸಿದನು : "ಪಠಾಣರ ದಬ್ಬಾಳಿಕೆಯಿಂದ ಜನರಿಗೆ ಬಿಡುಗಡೆಯನ್ನು ದೊರಕಿಸಿಕೊಡಲೆಂದೇ ನಾನು ಭಾರತದ ಮೇಲೆ ದಾಳಿ ಮಾಡಲು ಬಂದಿದ್ದೇನೆ." ಅದಕ್ಕೆ ಗುರು ಉತ್ತರಿಸಿದನು : "ನಿಜ. ಆದರೆ ಪ್ರಜೆಗಳ ಮೇಲೆ ದಬ್ಬಾಳಿಕೆಯನ್ನು ನಡೆಸಿದರೆ, ನೀನೂ ಅದೇ ಹಾದಿಯಲ್ಲಿ ನಡೆದಂತಾಗುತ್ತದೆ. ಈ ಐಶ್ವರ್ಯ, ಈ ಅಧಿಕಾರದಾಹಕ್ಕಾಗಿ ಅನೇಕರು ತಮ್ಮ ಬಾಳನ್ನೇ ಹಾಳುಮಾಡಿಕೊಂಡಿರುವುದನ್ನು ನೀನು ಕಂಡಿದ್ದೀಯೆ. ಪಾಪಕ್ಕೆಡೆಗೊಡದೆ ಅವು ದೊರೆಯುವುದೂ ಇಲ್ಲ, ಬಹುಕಾಲ ಯಾರ ಬಳಿ ನಿಲ್ಲುವುದೂ ಇಲ್ಲ. ಔದಾರ್ಯ ಹಾಗೂ ಒಳ್ಳೆಯತನ ಬಿಟ್ಟಂಥವರನ್ನು ನನ್ನ ದೇವರು ನಾಶಮಾಡಿಬಿಡುತ್ತಾನೆ." ಈ ಮಾತುಗಳು ಬಾಬರನ ಮೇಲೆ ತುಂಬ ಪ್ರಭಾವ ಬೀರಿದುವು. "ಓ ದೇವದೂತನೆ, ನನ್ನ ತಪ್ಪುಗಳನ್ನು ಕ್ಷಮಿಸು ; ಇನ್ನೆಂದೂ ಬಡವರ ಮೇಲೆ ದಬ್ಬಾಳಿಕೆಯನ್ನು ನಡೆಸುವುದಿಲ್ಲವೆಂದು ಭರವಸೆಯನ್ನು ನೀಡುತ್ತೇನೆ" ಎಂದು ನುಡಿದನು. "ದೇವರೆ ನಿನಗೆ ದಾರಿದೀಪವಾಗಲಿ" ಎಂದು ಆಶೀರ್ವದಿಸಿ ನಾನಕನು ಅವನಿಂದ ಬೀಳ್ಕೊಂಡನು.

ಸಯ್ಯದ್‌ಪುರಕ್ಕೆ ಬರುತ್ತಿದ್ದಂತೆಯೇ, ಬಾಬರನ ಸೈನಿಕರಿಂದ ಸಾಮೂಹಿಕ ಹತ್ಯೆಗೊಳಗಾಗಿ ಅಸುವಳಿದಿದ್ದ ಪ್ರಿಯಜನರನ್ನು ಕಂಡು ಗೋಳಿಡುತ್ತಿದ್ದ ಹೆಂಗಸರು ಮಕ್ಕಳ ಚೀತ್ಕಾರ ಮರ್ದನನ ಕಿವಿಗೆ ಬಿತ್ತು. ಹಿಡಿಮಂದಿಯ ತಪ್ಪಿಗಾಗಿ ಬಹುಮಂದಿ ನಿರಪರಾಧಿಗಳು ಏಕೆ ಸಾವಿಗೊಳಗಾಗುತ್ತಾರೆ ಎಂದು ಗುರುವನ್ನು ಕೇಳಿದನು. ಕೊಂಚ ಹೊತ್ತು ಅಶ್ವತ್ಥವೃಕ್ಷದ ಕೆಳಗೆ ವಿಶ್ರಮಿಸಿಕೊಂಡಿದ್ದು ಬರುವಂತೆಯೂ, ಅನಂತರ ಆತನ ಪ್ರಶ್ನೆಗೆ ಉತ್ತರ ಹೇಳುವುದಾಗಿಯೂ ಗುರು ಮರ್ದನನಿಗೆ ತಿಳಿಸಿದನು. ಮರದ ಕೆಳಗೆ ಮೈಚಾಚಿದ್ದ ಮರ್ದನನಿಗೆ ಹಾಗೆಯೇ ಜೊಂಪು ಹತ್ತಿತು. ಅನಂತರ ಇರುವೆಯೊಂದು ಕಡಿದದ್ದರಿಂದ ಇದ್ದಕ್ಕಿದ್ದಂತೆಯೇ ಅವನಿಗೆ ಎಚ್ಚರವಾಯಿತು. ಒಂದು ಬೀಸಿನಲ್ಲಿಯೇ, ತಾನು ಕಂಡಷ್ಟು ಇರುವೆಗಳನ್ನು ಕಾಲಿನಿಂದ ಒರೆಸಿ

ಹಾಕಿದನು. ಅನೇಕ ಇರುವೆ ಸತ್ತವು. ನಾನಕ್ ಇದನ್ನು ಕಂಡನು. ಮರ್ದನ ತನ್ನ ಪ್ರಶ್ನೆಗೆ ಉತ್ತರವನ್ನು ಕೇಳುವ ಮೊದಲೆ, "ಅಪರಾಧಿಗಳೊಂದಿಗೆ ನಿರಪ ರಾಧಿಗಳೂ ಏಕೆ ಸಾವುನೋವುಗಳಿಗೊಳಗಾಗುತ್ತಾರೆಂಬುದು ಈಗ ನಿನಗೆ ತಿಳಿಯಿತಲ್ಲವೆ ? ಮರ್ದನ" ಎಂದು ಕೇಳಿದನು. "ಓ ಗುರುವೆ ನಿನ್ನ ರಹಸ್ಯ ಗಳು ನಿನಗೊಬ್ಬನಿಗೆ ಮಾತ್ರವೇ ಗೊತ್ತು" ಎಂದು ಮರ್ದನ ಉತ್ತರಿಸಿದನು. ಸುತ್ತಮುತ್ತ ಎಲ್ಲೆಡೆಯೂ ಅಶಾಂತಿಯೇ ಬೀಡುಬಿಟ್ಟಿದ್ದುದನ್ನು ಕಂಡು ರಿಬೆಕ್ ವಾದ್ಯವನ್ನು ನುಡಿಸುವಂತೆ ಮರ್ದನನಿಗೆ ಸೂಚಿಸಿ ತಾನೇ ಈ ರೀತಿ ಹಾಡತೊಡಗಿದನು :

"ಓ ದೇವರೆ, ಖುರಾಸಾನವ ರಕ್ಷಿಸಿದೆ,
ಹಿಂದೂಸ್ತಾನಕೆ ಭಯದ ಮಳೆಗರೆದೆ.
ಇದರ ಹೊಣೆ ಹೊರುವವನಲ್ಲ ನೀನು. ಕಳುಹಿಸಿದೆ
ಸಾವುನೋವುಗಳ ಮಳೆಗರೆಯೆ ಮಂಗೋಲರನು.
ಜನರಿಂತು ಗೋಳಿಡಲು ಶಿಕ್ಷೆಗೊಳಗಾಗಿ ನಿನಗೆ ನೋವಾಗದೇನ್ ?
ಓ ಜನಕ, ನೀನೆಲ್ಲರವ.
ಬಲಾಢ್ಯ ಸೆಣಸಲು ಬಲಾಢ್ಯನೊಳ: ಚಿಂತೆಗೆಡೆಯಿಲ್ಲ.
ತುರುಮಂದೆಯ ಮೇಲೆರಗಲು ಬಲು ಹಸಿದ ಸಿಂಹ
ಒಡೆಯನೆ ತಾನುತ್ತರಿಸಲು ಬೇಕು.
ಎಣೆಯಿಲ್ಲದ ಬೆಲೆ ಹೊಂದಿಹ ಭಾರತವೆಂಬಾ ಒಡವೆಯನೊಡದು
ಅಭಿಶಾಪವೆ ತಾವೆನಿಸುವರು ; ಲೋಕದ ಸ್ಮೃತಿಪಥದಿಂದಲು
ಜಾರುವರದು ನಿಶ್ಚಯ ತಮ್ಮಯ ನಿರ್ಗಮನಾನಂತರದೊಳೆ.
ಎಲೆ ದೇವನೆ, ಲೋಗರ ಸೆಳೆವವನೂ ನೀನೆ ; ತಳ್ಳುವನೂ ನೀನೆ.
ನಿನ್ನಯ ಮಹಿಮೆಯಿದು.
ಹಿರಿ ಹೆಸರನು ಗಳಿಸಿ, ಮನ ತಣಿವೊಲು ಸೊಗವುಣ್ಣುವವ
ಹಿರಿದಿನಿ ಹುಳ ನಿನ್ನೆಣಿಕೆಯಲಿ
ಬದುಕಿರುವಂದೇ ತವನಾಮವ ಜಪಿಸುತ ಸಾಯುವ, ಭಕ್ತನೆ
ನಿಜಕೂ ನಿನ್ನನು ಗೆಲ್ಲುವನು.

ಇವನ್ನು ಕೇಳಿದ ಬಾಬರ್ ಮತ್ತೊಮ್ಮೆ ಬಂದು ಭೇಟಿಮಾಡುವಂತೆ ಅವನನ್ನು ಆಹ್ವಾನಿಸಿದನು. ಆತನು ಏನು ಕೇಳಿದರೂ ಕೊಡುವುದಾಗಿ ತಿಳಿಸಿದನು. "ದೇವರು ವಿನಾ ಇತರರಿಂದ ಬೇಡುವವನು ಮೂರ್ಖ" ಎಂದು ನಾನಕ್ ನುಡಿದನು. ಅತ್ಯಂತ ವಿಸ್ಮಿತನಾಗಿ ಬಾಬರ್ ಮತ್ತೆ ಮತ್ತೆ ಬೇಡಿಕೊಂಡಾಗ, ಸೆರೆಹಿಡಿದಿದ್ದವರನ್ನು ಬಿಟ್ಟು ಬಿಡುವಂತೆ ಅವನು ತಿಳಿಸಿದನು. ಚಕ್ರವರ್ತಿ ಹಾಗೆಯೇ ಮಾಡಿದನು. ಅನಂತರ ಬಾಬರ್ ನಾನಕನಿಗೆ ಮದ್ಯವನ್ನು ಅರ್ಪಿಸಿದನು. "ಕೊಂಚಕಾಲ ಮಾತ್ರ ಮಾನವನನ್ನು ಮೈಮರೆಸಿ, ಅವನನ್ನು ಉದಾಸೀನನನ್ನಾಗಿಯೂ, ಆಶಾಭಂಗಿತನನ್ನಾಗಿಯೂ ಮಾಡುವ ಮದ್ಯ ನನಗೆ ಬೇಕಿಲ್ಲ. ಇದಕ್ಕಿಂತಲೂ ಪ್ರಬಲತರವಾದದ್ದು ಮಾತ್ರ ನನ್ನ ಮೈಮರೆಸಬಲ್ಲದು." ಎಂದು ಹೇಳಿ ನಾನಕನು ಅದನ್ನು ತಿರಸ್ಕರಿಸಿದನು. ಅವನ ಈ ಮಾತನ್ನು ಅಪಾರ್ಥಮಾಡಿಕೊಂಡ ಬಾಬರ್ ಅವನಿಗೆ 'ಹಶೀಶ್' ಮದ್ಯವನ್ನರ್ಪಿಸಿದನು. ಅದನ್ನು ಕಂಡು ವಿನೋದಗೊಂಡ ನಾನಕ್ ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸಲು ಈ ಕೆಳಗಣ ಹಾಡನ್ನು ಹಾಡಿದನು :

"ಒಲವೇ ಅಫೀಮು ನನ್ನೆದೆಯೆ ಆಗರವದಕೆ,
ಓ ದೇವ, ಬಿಟ್ಟೆನೆಲ್ಲರನು, ಹುಚ್ಚ ನಾನಾಗಿಹೆನು ನಿನಗಾಗಿ.
ಭಕ್ತಿಯಂಜಲಿಯೆ ಜೋಳಿಗೆಯಾಗೆ, ನಿನ್ನ ದರ್ಶನಕಾಗಿ
ಹಾತೊರೆದು ಬಹೆನು ನಿನ್ನ ಬಾಗಿಲಿಗೆ.
ಓ ಎನ್ನೊಲವೆ, ಕರುಣಿಸೈ ಭಿಕ್ಷೆಯನು.
ಕೇಸರಿ, ಕಸ್ತೂರಿ, ಹೂ ಚಂದನಗಳ ಸಹವಾಸದೆ ಸುಗಂಧಿತರಾಗುವರೆಲ್ಲರು
ಅಂತೆಯೆ ಮಾಳ್ಪರು ಸಂತರು ಆತ್ಮದ ಸೌರಭದೆ.
ಬೆಣ್ಣೆಯ, ರೇಷ್ಮೆಯ ಕಲುಷಿತಗೊಳಿಸಲು ಸಾಧ್ಯವೆ ?
ಅಂತೆಯೆ, ಭಕ್ತನ ಆತ್ಮವು ತನಗಾಶ್ರಯವಿತ್ತಿಹ ಜಾತಿಯ ಮೀರಿಯೆ ನಿಲ್ಲುವುದು.
ಓ ದೇವನೆ, ನೀಡೈ ಕೃಪಾಭಿಕ್ಷೆಯ ನಾನಕಗೆ,
ಮರೆಯುವೆ ನೆನೆವೊಲು ನಿನ್ನಯ ನಾಮವನನವರತ."

ನ್ಯಾಯಶೀಲನಾಗಿದ್ದರೆ, ಪವಿತ್ರಾತ್ಮರನ್ನು ಆರಾಧಿಸುತ್ತ ಇದ್ದರೆ, ಐಹಿಕ ಸುಖಗಳಲ್ಲಿ ಮಗ್ನನಾಗದೆ ಇದ್ದರೆ, ಬಡವರ ವಿಚಾರದಲ್ಲಿ ಕನಿಕರವನ್ನು ತೋರುತ್ತ ಬಂದಿದ್ದರೆ, ತನ್ನೆಲ್ಲ ಕಾರ್ಯಗಳಲ್ಲಿಯೂ ಭಗವಂತನನ್ನು ಕಾಣುತ್ತಿದ್ದರೆ, ತಾನು ದುಃಖಿಯಾಗುವುದಿಲ್ಲವೆಂದೂ, ಅವನ ಆಳ್ವಿಕೆ ಬಹಳಕಾಲ ಮುಂದುವರೆಯುತ್ತದೆಂದೂ ಉಪದೇಶಿಸಿ ನಾನಕ್ ಚಕ್ರವರ್ತಿಯಿಂದ ಬೀಳ್ಕೊಂಡನು.

ಮುಂದೆ, ಪಸ್ರೂರ್ ಮೂಲಕವಾಗಿ ನಾನಕ್ ಸೀಯಾಲ್‌ಕೋಟೆಯತ್ತ ಸಾಗಿದನು. ಇಲ್ಲಿ ಆತನು ಒಂದು ಕಾಡು ಮರದಡಿಯಲ್ಲಿ ವಿಶ್ರಮಿಸಿಕೊಂಡನು. ಇಂದಿಗೂ ಅದು ಅವನ ಸ್ಮಾರಕವಾಗಿ ಉಳಿದುಬಂದಿದೆ. ಊರಿನೊಳಗೆ ಹೋಗಿ ಪ್ರತಿಯೊಂದು ಅಂಗಡಿಯಲ್ಲೂ ಎರಡು ಸಲ ಅರ್ಧಾಣೆಯ ನಾಣ್ಯವನ್ನು ನೀಡಿ "ನನ್ನ ಗುರುವಿಗೆ ಅರ್ಧಾಣೆ ಸತ್ಯ, ಅರ್ಧಾಣೆ ಅಸತ್ಯಬೇಕಾಗಿದೆ, ಕೊಡಿ." ಎಂದು ಕೇಳು ಎಂಬುದಾಗಿ ಮರ್ದನನಿಗೆ ಸೂಚಿಸಿದನು. ಈ ವಿಚಿತ್ರ ಸೂಚನೆ ಮರ್ದನನಿಗೆ ವಿನೋದಕರವಾಗಿ ಕಂಡಿತು. ಆದರೂ ಸತ್ಯದ ಯಾವುದೋ ಒಂದು ಮುಖವನ್ನು ಪರಿಚಯಿಸಿಕೊಡಲು ಗುರು ತನಗೆ ಹಾಗೆ ಆಜ್ಞಾಪಿಸಿರಬೇಕೆಂದು ಭಾವಿಸಿ, ಅವನು ಗುರುವಿಗೆ ಎದುರು ಮಾತಾಡಲಿಲ್ಲ. ಒಂದೊಂದು ಅಂಗಡಿಗೂ ಹೋಗಿ ಈ ಪ್ರಶ್ನೆಯನ್ನು ಕೇಳುತ್ತಾ ಹೋದನು. ಕೆಲವರು ಅವನನ್ನು ಹುಚ್ಚನೆಂದು ಭಾವಿಸಿದರು; ಮತ್ತೆ ಕೆಲವರು ಅವನು ತಮ್ಮನ್ನು ಅಪಹಾಸ್ಯ ಮಾಡುತ್ತಿರಬೇಕೆಂದು ಭಾವಿಸಿದರು. ಆದರೆ ಮೂಲಾ ಎಂಬ ಅಂಗಡಿ ಮಾಲೀಕನೊಬ್ಬ ಮಾತ್ರ ಆ ಪ್ರಶ್ನೆಯನ್ನು ಕೇಳಿ ವಿಸ್ಮಯಚಕಿತನಾಗಿ ಈ ರೀತಿ ಉತ್ತರಿಸಿದನು: "ಜೀವನವೇ ಅಸತ್ಯ, ಮರಣವೆ ಸತ್ಯ ಎಂಬುದಾಗಿ ನಿನ್ನ ಗುರುವಿಗೆ ಹೋಗಿ ಹೇಳು." ಮರ್ದನ ಗುರುವಿಗೆ ಈ ಉತ್ತರವನ್ನು ತಿಳಿಸಿದಾಗ "ಆ ಸೂಕ್ಷ್ಮ ಚೇತನವನ್ನು ನಾನು ಕಾಣಬಯಸುತ್ತೇನೆ. ಆತನಿಗೆ ಸದ್ವಸ್ತುವಿನ ಅರಿವು ದೊರೆತಿರುವಂತೆ ಕಾಣುತ್ತದೆ" ಎಂದು ನಾನಕ್ ನುಡಿದನು. ಮೂಲಾನನ್ನು ಗುರುವಿನ ಸನ್ನಿಧಿಗೆ ಕರೆತರಲಾಯಿತು. ಪ್ರವಾಸ ಕಾಲದಲ್ಲಿ ತನ್ನೊಡನೆ ಇರಬೇಕೆಂಬ ತನ್ನ ಇಚ್ಛೆಯನ್ನು ನಾನಕ್ ಮೂಲಾನಿಗೆ ತಿಳಿಸಿದನು. ಮೂಲಾ ಕೊಂಚಕಾಲ ಮಾತ್ರ ಹಾಗೆ ಮಾಡಿದನು. ಎರಡನೆಯ

ಬಾರಿ, ಗುರುನಾನಕ್ ಆ ಊರಿಗೆ ಬಂದು ಮೂಲಾನ ಎಲ್ಲಿಯಣವನ್ನು ವಿಚಾರಿಸಿದನು. ಮತ್ತೆ ಅವನು ತನ್ನನ್ನು ಬಿಟ್ಟುಹೋಗಬಹುದೆಂಬ ಭಯದಿಂದ ಮೂಲಾನ ಹೆಂಡತಿ ಅವನೆಲ್ಲೊ ದೂರದ ಊರಿಗೆ ಹೋಗಿದ್ದಾನೆಂದು ಸುಳ್ಳು ಹೇಳಿದಳು. ಮೂಲಾನಿಗೂ ಅಲೆದಾಟ ಬೇಸರ ತಂದಿದ್ದಂತೆ ಕಾಣುತ್ತದೆ. ಆ ಅವಧಿಯಲ್ಲಿ ಅವನಿಗೆ ಒಳ್ಳೆಯ ಭೋಜನವೂ ದೊರಕಿರಲಿಲ್ಲ. ಊರೂರು ಅಲೆದು ಎಲ್ಲೋ ಕಾಡಿನಲ್ಲಿ ಪ್ರಾಣಬಿಡುವುದಕ್ಕಿಂತಲೂ ತನ್ನ ಸಂಸಾರದೊಂದಿಗೆ ಮನೆಯಲ್ಲಿ ಸುಖವಾಗಿರುವುದೇ ಉತ್ತಮವೆಂದು ಅವನೂ ಭಾವಿಸಿದಂತೆ ಕಾಣುತ್ತದೆ. ತನಗೆ ಮೋಸಮಾಡುತ್ತಿದ್ದಾನೆಂಬುವರ ಸುಳಿವನ್ನು ಕಂಡುಕೊಂಡ ನಾನಕನ ಬಾಯಿಂದ ಈ ಮಾತು ಹೊರಬಂದುವು: "ಜೀವನವೇ ಅಸತ್ಯ, ಮರಣವೇ ಸತ್ಯವೆಂದು ಘೋಷಿಸುತ್ತಿದ್ದ ಈ ಮನುಷ್ಯ ಇಂದು ಅಸತ್ಯಕ್ಕೇ ಅಂಟಿಕೊಂಡಂತೆ ಕಾಣುತ್ತದೆ. ಹಾಗೆಯೇ ಆಗಲಿ. ಆದರೆ ಮೃತ್ಯುವಿಂದ ಯಾರುತಾನೇ ತಪ್ಪಿಸಿಕೊಳ್ಳಬಲ್ಲರು? ಎಲ್ಲಿದ್ದರೂ, ಅದು ಎಲ್ಲರನ್ನೂ ಅರಸಿಕೊಂಡು ಬರುತ್ತದೆ." ಮುಂದೆ, ಬಹುಬೇಗ ಹಾವುಕಚ್ಚಿ ಮೂಲಾ ಮೃತನಾದನೆಂದು ಹೇಳಲಾಗಿದೆ.

ಅಲ್ಲಿಂದ, ನಾನಕ್ ಮಿಠಾನ್ ಕೋಟೆಗೆ ಪ್ರಯಾಣಮಾಡಿದನು. ಅಲ್ಲಿ ಮಿಯಾಮಿಟ್ಠಾ (ಮಿಟ್ಠಾ ಎಂದರೆ ಸಿಹಿ ಎಂದು ಅರ್ಥ) ಎಂಬುವನನ್ನು ಭೇಟಿ ಮಾಡಿದನು. ಈತ ಒಬ್ಬ ಹಿರಿಯ ಸೂಫೀ ಸಂತನಾಗಿದ್ದ. ಅವನ ಹೆಸರು ವಿನಯಸೂಚಕವಾಗಿದ್ದರೂ, ತನ್ನ ಅಂತಸ್ತಿನ ಬಗ್ಗೆ ಅವನಿಗೆ ಬಹಳ ಅಹಂಕಾರವಿತ್ತು. ನಾನಕನ ಆಗಮನದ ವಿಚಾರವನ್ನು ತಿಳಿಸಿದಾಗ, "ನಾನು ಹೋಗಿ ಅವನನ್ನು ನೋಡುತ್ತೇನೆ. ನಿಂಬೆಹಣ್ಣಿನಂತೆ ಅವನನ್ನು ಹಿಂಡಿ ಹಿಪ್ಪೆಮಾಡಿಬಿಡುತ್ತೇನೆ" ಎಂದು ತನ್ನ ಅನುಯಾಯಿಗಳಿಗೆ ತಿಳಿಸಿದನು. ಅವನು ಬಂದಕೂಡಲೆ ನಾನಕ್ ಆತನನ್ನು ತುಂಬ ಗೌರವದಿಂದ ಸ್ವಾಗತಿಸಿದನು. ದರ್ಪಧ್ವನಿಯಲ್ಲೆ ಮಿಯಾ ಮಿಟ್ಠಾ ನಾನಕನನ್ನು ಈ ರೀತಿ ಪ್ರಶ್ನಿಸಿದನು: "ಓ ನಾನಕ್, ಇಲ್ಲಿರುವುದು ಎರಡೇ ಸಂಗತಿ: ದೇವರು ಮತ್ತು ಅವನ ದೂತ. ದೇವರ ಅಸ್ತಿತ್ವವನ್ನೊಪ್ಪಿಕೊಂಡರೆ, ಅವನ ದೂತನನ್ನೂ ಒಪ್ಪಿಕೊಂಡಂತಾಯ್ತು. ನೀನು ಪೈಗಂಬರನನ್ನು ಒಪ್ಪಿಕೊಳ್ಳುವುದೇ ಇಲ್ಲ. ಕುರಾನನ್ನೂ ಓದುವುದಿಲ್ಲ. ನಿನಗೆ ಮುಕ್ತಿ ದೊರೆಯುವುದಾದರೂ

ಹೇಗೆ?" "ನಾನೋದುವುದು ಸದ್ವರ್ತನೆಯೆಂಬ ಕುರಾನನ್ನು. ನಾನು ಭಗವಂತನಲ್ಲಿಯೇ ವಾಸಿಸುವುದರಿಂದ ಬೇರೊಬ್ಬನನ್ನು ಆಶ್ರಯಿಸುವುದಿಲ್ಲ. ಏಕೆಂದರೆ, ಒಬ್ಬನನ್ನು ಪ್ರೇಮಿಸಿದವನು ಮತ್ತೊಬ್ಬನನ್ನು ಪ್ರೇಮಿಸುವುದಿಲ್ಲ" ಎಂದು ನಾನಕ್ ಉತ್ತರಿಸಿದನು.

ಮಿಯಾಮಿಟ್ಠಾ ಮತ್ತೊಂದು ಸವಾಲೆಸೆದನು: "ಎಣ್ಣೆಯೇ ಇಲ್ಲದೆ ದೀಪ ಉರಿಯುವುದು ಸಾಧ್ಯವೆ?" ಪವಿತ್ರಗ್ರಂಥದ ಅಂದರೆ ಕುರಾನಿನ ನೆರವಿಲ್ಲದೆ ಹೃದಯವನ್ನು ಬೆಳಗಿಸಿಕೊಳ್ಳುವುದು ಹೇಗೆ ಸಾಧ್ಯ ಎಂಬುದೇ ಅವನ ಈ ಪ್ರಶ್ನೆಯ ಅಂತರ್ಯವಾಗಿತ್ತು. ನಾನಕನ ಜವಾಬು ಸಿದ್ಧವಾಗಿತ್ತು: "(ಶರೀರವೆಂಬ) ದೀಪದಲ್ಲಿ ಜ್ಞಾನವೆಂಬ ತೈಲವೂ ದೈವಭಯವೆಂಬ ಬತ್ತಿಯೂ ಇದ್ದು, ಸತ್ಯವೆಂಬ ಸೊಡರು ಆ ದೀಪವನ್ನು ಮುಟ್ಟಿಸಿದರೆ, ಅದರ ಬೆಳಕು ನಮ್ಮ ಒಳಗನ್ನು ಬೆಳಗುತ್ತದೆ. ನಾವು ದೇವರನ್ನು ಕಾಣುತ್ತೇವೆ. ತಾನು ಬದುಕಿರುವಾಗ ಯಾರು ಇತರರಿಗೆ ಸೇವೆಯನ್ನು ಸಲ್ಲಿಸುತ್ತಾನೋ ಅವನಿಗೆ ದೇವರ ಸನ್ನಿಧಿಯಲ್ಲಿ ಎಡೆದೊರೆಯುತ್ತದೆ."

ಅನಂತರ ಮಿಟ್ಠಾ ಮೂರು ಪ್ರಶ್ನೆಯೆಸೆದನು: "ಜ್ಞಾನ ಎಂದರೇನು? ದೈವವನ್ನು ಕಂಡು ಹೆದರುವುದೆಂತು? ಸತ್ಯದ ಸೊಡರನ್ನು ಹತ್ತಿಸುವುದೆಂತು, ಸತ್ಯ ಎಂದರೇನು?" ನಾನಕ್ ನಿರಾತಂಕವಾಗಿ ಉತ್ತರಿಸಿದನು: "ಒಲವೇ ಜ್ಞಾನ, ಪ್ರೇಮಪೂರ್ಣ ಶರಣಾಗತಿಯೇ ಭಗವದ್ಭಯ. ತತ್ಸಂಬಂಧವಾದ ವಿಶ್ವಾಸಾಭಿವ್ಯಕ್ತಿಯೇ ಆ ಸೊಡರನ್ನು ಹತ್ತಿಸುವ ಬಗೆ; ಎಲ್ಲರಲ್ಲಿಯೂ, ಎಲ್ಲ ವಸ್ತುಗಳಲ್ಲಿಯೂ ಇರುವವನು ಅವನೊಬ್ಬನೆ ಎಂಬುದನ್ನರಿಯುವುದೇ ನಾವು ಅರಿಯಬೇಕಾಗಿರುವ ಏಕೈಕ ಸತ್ಯ."

"ದೇವರಿಗೆ ಅತ್ಯಂತ ಪ್ರಿಯವಾಗಿರುವ, ಅತ್ಯಂತ ಪವಿತ್ರವಾಗಿರುವ ಹೆಸರು ಯಾವುದು?" ಎಂಬ ಮಿಟ್ಠಾನ ಕೊನೆಯ ಪ್ರಶ್ನೆಗೆ ನಾನಕ್ ಈ ರೀತಿ ಉತ್ತರಿಸಿದನು: "ನಿನ್ನನ್ನು ಧ್ಯಾನಮಗ್ನಗೊಳಿಸುವ ಯಾವ ಹೆಸರಾದರೂ ಸರಿ. ನಿನಗೆ 'ಅಲ್ಲಾ' ಎಂಬುದೇ ಆ ಹೆಸರು. "ಮೂರು ಬಾರಿ 'ಅಲ್ಲಾ' ಎಂದು ಉಚ್ಚರಿಸಿ, ನಾನಕ್ ಅವನಿಂದ ಬೀಳ್ಕೊಂಡು ಹೊರಟನು. ಮಿಟ್ಠಾ ಮೊದಲಿಗಿಂತಲೂ ಹೆಚ್ಚು ಪವಿತ್ರಾತ್ಮನಾದನು.

ನಾನಕ್ ಮುಂದೆ ಲಾಹೋರನ್ನು ತಲುಪಿದನು. ಅಲ್ಲಿ ದೂನಿಚಂದನೆಂಬ

ಕೋಟ್ಯಾಧೀಶ್ವರನ ಮನೆಬಾಗಿಲಲ್ಲಿ ಅನೇಕ ಧ್ವಜಗಳನ್ನು ಕಂಡನು. ಅವುಗಳ ಅರ್ಥವೇನೆಂದು ಕೇಳಿದಾಗ, ಒಂದೊಂದು ಧ್ವಜವೂ ಒಂದೊಂದು ಲಕ್ಷ ರೂಪಾಯಿಯ ಸಂಕೇತ ಎಂದು ಯಾರೋ ಒಬ್ಬಿಬ್ಬರು ವಿವರಿಸಿದರು. ಈ ಮಹಾತ್ಮನ ಆಗಮನವಾರ್ತೆಯನ್ನರಿತು ದೂನಿಚಂದ ತನ್ನ ತಂದೆಯ ತಿಥಿಯ ಅಂಗವಾಗಿ ಏರ್ಪಡಿಸಿದ್ದ ಭೋಜನಕೂಟದಲ್ಲಿ ಭಾಗವಹಿಸಿ, ಆ ಸಮಾರಂಭಕ್ಕೆ ಕಳೆಯೇರಿಸಬೇಕೆಂದು ಬಹುವಾಗಿ ಪ್ರಾರ್ಥಿಸಿಕೊಂಡನು. ನಾನಕ್ ಅವನ ಪ್ರಾರ್ಥನೆಗೆ ಒಪ್ಪಿ ಈ ರೀತಿ ನುಡಿದನು: "ನನ್ನ ಪ್ರಶ್ನೆಯೊಂದಕ್ಕೆ ನೀನು ಉತ್ತರ ನೀಡುವುದಾದರೆ ಭೋಜನಕೂಟದಲ್ಲಿ ಭಾಗವಹಿಸುತ್ತೇನೆ." "ಆ ಪ್ರಶ್ನೆ ಯಾವುದು ?" ಎಂದು ದೂನಿಚಂದ ಅತ್ಯಂತ ವಿನಯದಿಂದ ಕೇಳಿಕೊಂಡನು. "ನಾನು ನನ್ನ ಜೀವನಪರ್ಯಂತ ಪ್ರೀತಿಸುತ್ತ ಬಂದಿರುವ ಈ ಸಣ್ಣ ಸೂಜಿಯನ್ನು ಪರಲೋಕದಲ್ಲಿ ನೀನು ನನಗೆ ಕ್ಷೇಮವಾಗಿ ತಲುಪಿಸುವುದಾದರೆ ನಾನು ಈ ಭೋಜನಕೂಟದಲ್ಲಿ ಭಾಗವಹಿಸುತ್ತೇನೆ" ಎಂದು ನಾನಕ್ ನುಡಿದನು. "ಈ ಲೋಕದ ವಸ್ತುಗಳನ್ನು ಪರಲೋಕಕ್ಕೊಯ್ಯುವುದು ಹೇಗೆ?" ಎಂದವನು ಪ್ರಶ್ನಿಸಿದಾಗ "ನಿನ್ನ ಸಾವಿನ ತರುವಾಯ ಸಣ್ಣ ಸೂಜಿಯೊಂದನ್ನು ಕೊಂಡೊಯ್ಯಲಾರದ ನೀನು ನಿನ್ನ ಮನೆಯ ಬಾಗಿಲಲ್ಲಿ ಐಶ್ವರ್ಯ ಪ್ರದರ್ಶನವನ್ನೇಕೆ ಏರ್ಪಡಿಸಿದ್ದೀಯೆ ?" ಎಂದು ನಾನಕ್ ಮರುಪ್ರಶ್ನೆ ಹಾಕಿದನು. ತನ್ನ ಐಶ್ವರ್ಯವನ್ನು ಈ ರೀತಿ ಅವಿಚಾರ್ಯವಾಗಿ ಪ್ರದರ್ಶಿಸಿದುದಕ್ಕಾಗಿ ದೂನಿಚಂದನಿಗೆ ನಾಚಿಕೆಯಾಯಿತು. ಗುರುವಿನ ಆದೇಶದಂತೆ ತನ್ನ ಐಶ್ವರ್ಯವನ್ನೆಲ್ಲ ಬಡಬಗ್ಗರಿಗೆ ಹಂಚಿ, ದೇವರ ಧ್ಯಾನದಲ್ಲಿಯೂ, ನಿಸ್ಸಹಾಯರಿಗೆ ನೆರವಾಗುವುದರಲ್ಲಿಯೂ ತನ್ನ ಕಾಲವನ್ನು ವಿನಿಯೋಗಿಸಿದನು.

ರಾವಿನದಿಯ ದಡದ ಕರ್ತಾರಪುರಕ್ಕೆ ಆಗಮಿಸಿದ ನಾನಕ್ ಅಲ್ಲಿಯೇ ಕೆಲಕಾಲ ನಿಂತನು. ಏಳು ವರ್ಷದ ಬಾಲಕನೊಬ್ಬ ಪ್ರತಿದಿನ ಬೆಳಗ್ಗೆ ಮತ್ತು ಸಂಜೆ ನಾನಕನ ಬಳಿಗೆ ಬರುತ್ತಿದ್ದನು. ಇಷ್ಟು ಸಣ್ಣವಯಸ್ಸಿನಲ್ಲಿಯೇ ನನ್ನ ಬಳಿಗೆ ಏಕೆ ಬರುತ್ತಿದ್ದೀಯೆ" ಎಂದು ಒಂದು ದಿನ ಆ ಬಾಲಕನನ್ನು ಪ್ರಶ್ನಿಸಿದಾಗ ಅವನು ಈ ರೀತಿ ಉತ್ತರಿಸಿದನು: "ನನ್ನ ತಾಯಿ ಒಲೆ ಹತ್ತಿಸುವುದನ್ನು ನೋಡಿದ್ದೇನೆ. ಪುಳ್ಳೆ ಮೊದಲು ಹತ್ತಿಕೊಂಡು ಉರಿಯುತ್ತವೆ. ಸಾವು

ಯಾವಾಗ ಬರುತ್ತದೆಂಬುದು ಗೊತ್ತಾಗುವುದಿಲ್ಲವೆಂದು ನನಗದರಿಂದ ತಿಳಿಯಿತು. ಆದ್ದರಿಂದ ಆದಷ್ಟು ಬೇಗ ನಾನು ದೇವರ ಹಾದಿಯಲ್ಲಿ ಮುಂದೆ ಸಾಗಬೇಕು." ಈ ಉತ್ತರ ನಾನಕನಿಗೆ ತುಂಬ ಹಿಡಿಸಿತು. ಮುಂದೆ ಈ ಹುಡುಗನೇ ತಲೆನರೆಯುವವರೆಗೆ ಬಾಳಿ, ಖ್ಯಾತನಾಮನಾದ ಸಂತನಾದನು; ನಾನಕನ ಗಾದಿಗೆ ಐವರು ಉತ್ತರಾಧಿಕಾರಿಗಳೆಂದು ನೇಮಕವಾದವರಲ್ಲಿ ಇವನೂ ಒಬ್ಬನಾದನು. ಅಂದಿನಿಂದಲೂ 'ಬಾಬಾ ಬುಡ್ಡಾ' (ಅಂದರೆ ಗೌರವಾರ್ಹನಾದವನು) ಎಂದು ಹೆಸರಾದನು. ತೀರ ಚಿಕ್ಕವಯಸ್ಸಿನಲ್ಲಿಯೇ ಪ್ರೌಢಾವಸ್ಥೆಯನ್ನು ತಲುಪಿದುದರಿಂದ ಅವನಿಗೆ ಆ ಹೆಸರು ಬಂದಿತು.

ನಾನಕ್ ಕರ್ತಾರಪುರದಲ್ಲಿ ತಂಗಿದ್ದ ಸಮಾಚಾರವನ್ನು ಕೇಳಿ ಗುರುವಿಗೆ ಗೌರವವನ್ನರ್ಪಿಸಲು ದೂರದ ಹಾಗೂ ಹತ್ತಿರದ ಹಳ್ಳಿಗಳಿಂದ ಗಂಡಸರು ಹೆಂಗಸರು ಗುಂಪುಗುಂಪಾಗಿ ಧಾವಿಸತೊಡಗಿದರು. ಭರತಖಂಡದ ನಾಲ್ಕು ಮೂಲೆಗಳಿಗೂ ಆತನ ಖ್ಯಾತಿ ಹಬ್ಬಿತ್ತು: ಅವನ ಹೆಂಡತಿ ಮಕ್ಕಳು, ತಾಯಿ ಮತ್ತು ಬಂಧುಬಾಂಧವರೊಡನೆ ಅವನ ತಂದೆಯೂ ಅಲ್ಲಿಗೆ ಬಂದನು. ನಾನಕ್ ತನ್ನ ವಿಶಿಷ್ಟ ಉಡುಗೆಗಳನ್ನು ಕಳಚಿ ಬಿಸುಟು, ಲೋಕಾರೂಢಿಯಂತೆ ತಲೆಗೆ ರುಮಾಲು, ಭುಜದ ಮೇಲೆ ಅಂಗವಸ್ತ್ರ ಮತ್ತು ನಡುವಿಗೊಂದು ದಟ್ಟಿಯನ್ನು ಧರಿಸಿಕೊಂಡಿದ್ದನು. ಬೆಳಿಗ್ಗೆ ಮತ್ತು ಸಂಜೆ ಧಾರ್ಮಿಕ ಸೇವೆಗಳು ನಡೆಯುತ್ತಿದ್ದುವು. ಅವನು ಬೇಸಾಯುವನ್ನೂ ಪ್ರಾರಂಭಿಸಿದನು. ಆ ಕ್ಷೇತ್ರದ ಉತ್ಪನ್ನದಿಂದ ಅಲ್ಲಿಗೆ ಬಂದವರೆಲ್ಲರಿಗೂ ಸಮಾರಾಧನೆ ನಡೆಸುತ್ತಿದ್ದನು. ಸಾಮೂಹಿಕ ಭೋಜನ ಶಾಲೆಗೆ ಅಸ್ತಿಭಾರ ಹಾಕಿದ್ದು ಹೀಗೆ. ಉಚ್ಚ-ನೀಚ, ಸವರ್ಣೀಯ ವರ್ಣಹೀನನೆಂಬ ಭೇದವಿಲ್ಲದೆ ಎಲ್ಲ ಮತಗಳ ಜನರೂ ಸಹಭೋಜನಮಾಡುವ ಪದ್ಧತಿ ಬಹುಶಃ ಭಾರತದಲ್ಲಿ ಪ್ರಾರಂಭವಾದದ್ದು ಆಗಲೇ. ಒಮ್ಮೆ ಒಬ್ಬ ಬ್ರಾಹ್ಮಣ ನಾನಕನ ಬಳಿಗೆ ಬಂದು ಭಿಕ್ಷೆ ಬೇಡಿದನು. ಇತರರೊಡನೆ ಸಾಮೂಹಿಕ ಭೋಜನಶಾಲೆಗೆ ಹೋಗಿ ಆಹಾರವನ್ನು ಸ್ವೀಕರಿಸಬಹುದೆಂದು ಆತನಿಗೆ ಸೂಚಿಸಲಾಯಿತು. ತಾನು ತಿನ್ನುವ ಆಹಾರವನ್ನು ತಾನೇ ಸಿದ್ಧಪಡಿಸಿ ತಿನ್ನಬೇಕು; ಇಲ್ಲವಾದರೆ ತಾನು ಅಪವಿತ್ರನಾಗುವುದಾಗಿ ಹೇಳಿ ಆತನು ಆ ಸೂಚನೆಯನ್ನು ತಿರಸ್ಕರಿಸಿದನು. "ಮೊದಲು ನೆಲವನ್ನಗೆದು ಗುರುತುಮಾಡಿ, ಸಗಣಿಯಿಂದ ಗೋಮಯ ಹಚ್ಚಬೇಕು,

ಸೌದೆಯನ್ನು ಶುದ್ಧಪಡಿಸಬೇಕು ; ಏಕೆಂದರೆ ಅದರೊಡನೆ ಯಾವ ಕ್ರಿಮಿ ಕೀಟಗಳೂ ಸುಟ್ಟುಹೋಗಬಾರದು, ಅನಂತರ ಅಡಿಗೆ ಸಿದ್ಧಪಡಿಸಬೇಕು" ಎಂದು ಆ ಬ್ರಾಹ್ಮಣ ಹೇಳಿದನು. ನೆಲವನ್ನಗೆದಾಗ ಯಾವುದೇ ಪ್ರಾಣಿ ಹೊರಬರದಿದ್ದಲ್ಲಿ, ಅಡುಗೆಗೆ ಪಡಿಕೊಡಿಸುವುದಾಗಿ ನಾನಕ್ ಭರವಸೆ ನೀಡಿದನು. ಆದರೆ ಆ ಬ್ರಾಹ್ಮಣ ಅದಕ್ಕೂ ಒಪ್ಪಲಿಲ್ಲ. "ಹೀನಬುದ್ಧಿಯಿಂದ ನಾವು ಅಪವಿತ್ರರಾಗುತ್ತೇವೆಯೇ ಹೊರತು ಆಹಾರದಿಂದಲ್ಲ" ಎಂದು ನಾನಕ್ ಅವನಿಗೆ ಉಪದೇಶಿಸಿದನು.

ತಪದಿಂದ ಒಳಿತಾಗುತ್ತದೆಯೆ ಎಂದು ವಿಶಾಲೋ ಮತ್ತು ಭಾಗೋ ಎಂಬ ಇಬ್ಬರು ಸಿಖ್ಖರು ನಾನಕನನ್ನು ಪ್ರಶ್ನಿಸಿದರು. ನಾನಕ್ ಈ ರೀತಿ ಉತ್ತರ ವಿತ್ತನು : "ತಪಸ್ಸಿನಿಂದ ದೇವರ ಒಳ್ಳೆಯತನವನ್ನು ತಿರಸ್ಕರಿಸಿದಂತಾಗು ತ್ತದೆ. ದೇವರ ದೇಗುಲವಾಗಿರುವ ಈ ಶರೀರಕ್ಕೆ ತಿಳಿದೂ ತಿಳಿದೂ ನಾವು ನೋವನ್ನುಂಟುಮಾಡಿದರೆ ನಾವವನಿಗೆ ಸಂತೋಷವನ್ನುಂಟುಮಾಡಿದಂತಾ ಯಿತೆ? ಆಸೆಯನ್ನು ಸುಡಬೇಕೇ ಹೊರತು ಶರೀರವನ್ನಲ್ಲ. ಜೀವನ ವ್ಯವಹಾರದಿಂದ ಮನಸ್ಸನ್ನು ಬಲಾತ್ಕಾರವಾಗಿ ಬೇರ್ಪಡಿಸುವುದರಿಂದ ಚಿತ್ತೈಕಾಗ್ರತೆಯನ್ನು ಸಾಧಿಸಲಾಗದು. ತನ್ನೆಲ್ಲ ಕ್ರಿಯೆಗಳನ್ನೂ ಭಗವಂತ ನಿಗೆ ಸಮರ್ಪಿಸುವುದರಿಂದ ಚಿತ್ತೈಕಾಗ್ರತೆಯನ್ನು ಸಂಪಾದಿಸಬಹುದು. ಯಾರ ಮನಸ್ಸು ಪಾವನವಾಗಿದೆಯೋ, ಯಾರು ಯಾರೊಬ್ಬರಿಗೂ ಹಿಂಸೆಯನ್ನುಂಟುಮಾಡುವುದಿಲ್ಲವೋ, ವೇಷ-ವಸನಗಳನ್ನು ಪರಿಗಣಿಸದೆ ಯಾರು ಎಲ್ಲರನ್ನೂ ಸೇವಿಸುತ್ತಾನೆಯೋ, ಲೌಕಿಕದ ನಡುವಿದ್ದುಕೊಂಡೂ ಯಾರು ಆಸೆಗಳಿಂದ ಮುಕ್ತನಾಗಿರುತ್ತಾನೆಯೋ, ಅತ್ಯಂತ ವಿನಯಿಯಾಗಿರು ತ್ತಾನೆಯೋ ಅವನೇ ಪವಿತ್ರಾತ್ಮನು."

ಇಲ್ಲಿಯೇ ಗುರು ನಾನಕ್ ತನ್ನ ಅತ್ಯುತ್ಕೃಷ್ಟ ಕೃತಿಯಾದ 'ಬಾರಾಮಾಹ" ವನ್ನು ರಚಿಸಿದನೆಂದು ಹೇಳಲಾಗಿದೆ. ವಿದೇಶಯಾತ್ರಿಯಾಗಿರುವ ಪತಿಯ ವಿರಹ ವೇದನೆಯಿಂದ ಕೊರಗುತ್ತಿರುವ ನವವಧುವಿನಂತೆ ತನ್ನ ಏಕೈಕ ದೇವನ ಸಮಾಗಮಕ್ಕಾಗಿ ಕಾತರಿಸುತ್ತಿರುವ ನಾನಕನ ಅನನ್ಯಭಕ್ತಿಯ ಚಿತ್ರ ಇದರಲ್ಲಿದೆ. ತಿಂಗಳು ತಿಂಗಳೂ ಬದಲಾಗುವ ಪ್ರಕೃತಿಯ ಸ್ವರೂಪಗಳ ವರ್ಣನೆ ಅತ್ಯುತ್ಕೃಷ್ಟ ಕಾವ್ಯದ ರೂಪದಲ್ಲಿ ಮೈದಳೆದಿದೆ. ಇದು ಪ್ರೇಮಿಕೆಯ

ವಿರಹಭಾವವನ್ನು ಮತ್ತು ಸಮಾಗಮದ ಬಯಕೆಯನ್ನು ಮತ್ತಷ್ಟು ತೀವ್ರ ವಾಗಿಸುತ್ತದೆ.

ತನ್ನ ಮಗಳ ಮದುವೆಯನ್ನು ಮಾಡಿ ಮುಗಿಸಲು ತನಗೆ ನೆರವಾಗ ಬೇಕೆಂದು ಸಿಖ್ಖನೊಬ್ಬ ನಾನಕನನ್ನು ಬೇಡಿಕೊಂಡನು. ಆಭರಣಗಳನ್ನು ತರಲು ನಾನಕನು ಭಗೀರಥನೆಂಬ ತನ್ನ ಶಿಷ್ಯನನ್ನು ಲಾಹೋರಿಗೆ ಕಳುಹಿಸಿ ದನು. ಆದರೆ ರಾತ್ರಿ ಅಲ್ಲಿ ತಂಗಕೂಡದೆಂದು ಸೂಚಿಸಿದನು. ಆ ಭಕ್ತ ಅತ್ಯಂತ ಎಚ್ಚರಿಕೆಯಿಂದ ಅವನ ಸೂಚನೆಗಳನ್ನು ಪರಿಪಾಲಿಸಿದನು. ಅವನ ವರ್ತನೆಯನ್ನು ಕಂಡು ಆಶ್ಚರ್ಯಗೊಂಡ ಆ ಚಿನಿವಾರ ಅವನೊಡನೆ ಗುರು ನಾನಕನ ಬಳಿಗೆ ಬಂದನು. ಅಲ್ಲಿ ನಾನಕನ ಧರ್ಮಪಾವಿತ್ರ್ಯವನ್ನೂ ದರ್ಶನ ವನ್ನೂ ಕಂಡು ಪ್ರಭಾವಿತನಾಗಿ ಅವನ ಶಿಷ್ಯನಾದನು. ತನ್ನ ಐಶ್ವರ್ಯವನ್ನು ಬಡಬಗ್ಗರಿಗೆ ಹಂಚಿ, ತಾನು ಮೆಚ್ಚಿದ ಹೊಸಧರ್ಮದ ಸಂದೇಶವನ್ನು ಪ್ರಚಾರಮಾಡಲು ಅವನು ಸಿಂಹಳಕ್ಕೆ ತೆರಳಿದನೆಂದೂ, ಅಲ್ಲಿಯ ರಾಜ ನಾಗಿದ್ದ ರಾಜಾಶಿವನಾಭನನ್ನು ನಾನಕನ ಪಂಥಕ್ಕೆ ಪರಿವರ್ತಿಸಿದನೆಂದೂ ಹೇಳಲಾಗಿದೆ.

ಆ ಹೊತ್ತಿಗೆ ದಕ್ಷಿಣಭಾರತದಲ್ಲಿ ಸಂಚರಿಸುವುದೆಂದು ನಾನಕನೂ ತೀರ್ಮಾನಿಸಿದನು. ಸೈದೋ ಮತ್ತು ಘೇಓ ಎಂಬ ಇಬ್ಬರು ಜಾಟರು ಅವನ ಸಂಗಾತಿಗಳಾದರು. ಪ್ರತಿದಿನವೂ ಬೆಳಿಗ್ಗೆ ಎದ್ದು ನಾನಕ್ ನದಿಯ ಸ್ನಾನ ಮಾಡುತ್ತಿದ್ದುದನ್ನು ಕಂಡ ಸಂಗಾತಿಗಳು ತಮ್ಮ ಗುರು 'ಖ್ವಾಜಾ ಖಜಾರ್' ಎಂಬ ಜಲದೇವತೆಯನ್ನು ಅರ್ಚಿಸುತ್ತಿರಬೇಕೆಂದು ಭಾವಿಸಿದರು. ಒಂದು ದಿನ ಖ್ವಾಜಾ ಖಜಾರ್ ಅವರಿಗೆ ಕಾಣಿಸಿಕೊಂಡು, ತಾನು ಜಲವಾದರೆ, ನಾನಕ್ ಜಲವನ್ನೊಳಗೊಂಡಿರುವ ವಾಯು ಎಂದು ಹೇಳಿದನಂತೆ. ಆಗ ಅವರ ಸಂದೇಹ ದೂರವಾಯಿತು. ಅನಂತರ ಅವರು ಅನನ್ಯಶ್ರದ್ಧೆಯಿಂದ ಗುರು ಸೇವೆ ಮಾಡಲು ಕಂಕಣಬದ್ಧರಾದರು.

ದಕ್ಷಿಣದತ್ತ ಸರಿಯುವಾಗ ದಾರಿಯಲ್ಲಿ ಅವರು ಜೈನದೇವಾಲಯ ವೊಂದನ್ನು ಕಂಡರು. ಅದರ ಪಾಲಕನಾಗಿದ್ದ ನರಭಿ ಎಂಬುವನು ನಾನಕ ನನ್ನು ಭೇಟಿಮಾಡಿ, ಪ್ರಶ್ನೆಗಳ ಮಳೆಗರೆದನು: "ನೀವು ಹಳೆಯ ದವಸ ತೆಗೆದುಕೊಳ್ಳುತ್ತೀರೋ ಅಥವಾ ಹೊಸದು ಮಾತ್ರವೋ? ಹಣ್ಣು ಪಡೆ

ಯಲು ಮರ ಅಲ್ಲಾಡಿಸುತ್ತೀರಾ? ಹಾಗಾದರೆ ನೀವು ಜೀವಗಳನ್ನು ನಾಶ ಪಡಿಸುತ್ತೀರಲ್ಲವೆ? ಅದು ನಿಜವಾದರೆ ಮಹಾತ್ಮನೆಂಬ ಹೆಸರಿಗೆ ನೀವು ಅರ್ಹರಾಗುವಿರಾ?" ನಾನಕನು ಈ ರೀತಿ ಉತ್ತರಿಸಿದನು: "ಹದಿನಾಲ್ಕು ರತ್ನಗಳು ಉದಿಸಿಬಂದದ್ದು ನೀರಿನಿಂದ. ಒಂದೂಗಳ ತೀರ್ಥಕ್ಷೇತ್ರಗಳೆಲ್ಲಾ ನದಿಯ ದಡಗಳಲ್ಲಿಯೇ ಇವೆ. ನೀರು ನಮ್ಮನ್ನು ಶುದ್ಧಗೊಳಿಸುತ್ತದೆ. ಜೀವ ದಾಯಿಯೂ ಶುದ್ಧವೂ ಆದ ಹರಿವ ನೀರನ್ನು ಯಾರಾದರೂ ತ್ಯಜಿಸಲಾಗು ತ್ತದೆಯೆ? ಇನ್ನು ಜೀವಗಳನ್ನು ನಾಶಮಾಡುವ ವಿಚಾರ. ಜೀವವಿಲ್ಲದ ವಸ್ತುವಿದೆಯೆ? ಹೂ ಎಲೆಗಳಿಗೆ ಜೀವವಿದೆ; ಅಂತೆಯೆ ನೀರಿಗೂ ಕೂಡ. ದವಸ-ಧಾನ್ಯಗಳೂ ಅಷ್ಟೇ; ಹಾಲು ಮೊಸರುಗಳೂ ಅಷ್ಟೆ. ಜ್ಞಾನದಿಂದ ಮುಕ್ತಿ ದೊರೆಯುತ್ತದೆಯೇ ಹೊರತು ದೇವರು ನಮಗೆ ಕರುಣಿಸಿರುವ ಆಹಾರವನ್ನು ಒಂದಲ್ಲ, ಒಂದು ವಿಧದಿಂದ ತಿರಸ್ಕರಿಸುವುದರಿಂದಲ್ಲ."

ಸಾಗರದಲ್ಲಿದ್ದ ಒಂದು ದ್ವೀಪವನ್ನು ದಾಟಹೋಗುತ್ತಿರುವಾಗ ನರಮಾಂಸ ಭಕ್ಷಕನಾಗಿದ್ದ ಭೂತಾಕಾರದ ವ್ಯಕ್ತಿಯೊಬ್ಬನು ಇವರ ದಾರಿಯನ್ನು ಅಡ್ಡ ಗಟ್ಟಿದನು. ಈಸಲ ಸೀಹೋ ಎಂಬ ಮತ್ತೊಬ್ಬ ಜಾಟನೂ ನಾನಕನ ಜೊತೆಯಲ್ಲಿದ್ದನು. ಅವರನ್ನು ಕಂಡೊಡನೆಯೇ ಕೊಂದು ತಿನ್ನಬೇಕೆಂದು ಭೂತಾಕಾರದ ವ್ಯಕ್ತಿ ಬಯಸಿತು. ಸ್ಯೆದೋ ಮತ್ತು ಸೀಹೋ ವ್ಯಾಕುಲ ಚಿತ್ತರಾಗಿ ರೋದಿಸತೊಡಗಿದರು. ಅವಿಚಲಿತನಾಗಿ ನಿಂತ ನಾನಕ್ ಹಾಡ ತೊಡಗಿದನು:

> "ದೇವನು ಕರುಣಾಮಯಿ ತಾನಾದರೆ ಭಕ್ತನ ನಡಪುವ ತನ್ನಿಚ್ಛೆ
> ಯೊಲು.
> ಸೊಗವೆಡರೇನೇ ಒದಗಲಿ ದೇವನನಾವನು
> ನೆನೆವನೊ ಅವನೇ ಪ್ರಿಯ ನನ್ನಯ ದೇವನಿಗೆ"

ಭಯಂಕರ ಅಪಾಯವೇ ಎದುರಾದಾಗಲೂ ನಿರ್ಭೀತನಾಗಿ ನಿಂತ ಅವನ ಪವಿತ್ರ ಶಾಂತ ಮುಖಮುದ್ರೆಯನ್ನು ಕಂಡ ಆ ದ್ರೋಹಿ ಬೆಚ್ಚಿ ಬದಲಾ ದನು. ಮುಂದೆ ಆತ ಮಹಾನ್ ಭಗವದ್ಭಕ್ತನಾದನೆಂದು ಹೇಳಲಾಗಿದೆ.

ದಾರಿಯಲ್ಲಿ ನಾನಕನು ಮಖದುಮ್ ಬಹಾಉದ್ದೀನ್ ಖುರೇಷಿ ಎಂಬ

ಮುಸ್ಲಿಮ್ ಪೀರನೊಬ್ಬನನ್ನು ಭೇಟಿಯಾದನು. ತನ್ನ ಆಧ್ಯಾತ್ಮಿಕ ಸಿದ್ಧಿಯ ಬಗ್ಗೆ ಆತನಿಗೆ ತುಂಬ ಅಭಿಮಾನವಿತ್ತು. ಅವನು ತುಂಬ ಪ್ರಸಿದ್ಧನೂ ಆಗಿದ್ದನು. ತಾನು ನಡೆಸಿದ ಅನೇಕ ಪವಾಡಗಳ ವಿಚಾರವನ್ನು ಅವನು ನಾನಕನಿಗೆ ವರ್ಣಿಸಿದನು. "ಆಧ್ಯಾತ್ಮಿಕ ಸಾಧಕನಾಗಿದ್ದೂ, ನಿನಗೆ ಇಷ್ಟೊಂದು ಆತ್ಮಾಭಿಮಾನವೆ? ವಿನಯದ ಹಾದಿಯೇ ದೇವರ ಹಾದಿ. ಆತ್ಮಪ್ರಶಂಸೆಯ ಮೋಹಕ್ಕೊಳಗಾದವನು ದೇವರಿಂದ ದೂರವಾಗುತ್ತಾನೆ" ಎಂದು ನಾನಕ್ ಬಿಚ್ಚುನುಡಿಗಳನ್ನಾಡಿದನು. ಈ ಬಿಚ್ಚು ಬಿರುನುಡಿಗಳನ್ನು ಮನಸ್ಸಿಗೆ ಬಹುವಾಗಿ ಹಚ್ಚಿಕೊಂಡ ಸಂತ, ಇನ್ನು ಕೆಲವು ದಿನ ಅಲ್ಲಿಯೇ ತಂಗಿದ್ದು ತನಗೆ ದೇವರ ದಾರಿಯನ್ನು ತೋರಬೇಕೆಂದು ಪ್ರಾರ್ಥಿಸಿದನು. ನಾನಕ್ ಅವನ ಪ್ರಾರ್ಥನೆಗೆ ಉತ್ತರವಾಗಿ ಈ ರೀತಿ ನುಡಿದನು :

"ಎಲ್ಲವು ನಶ್ವರವಾಗಿರೆ ಒಂದೆಡೆ ನಿಲ್ಲುವರಾರು?
ನಾನಿಹ ನೆಲೆ ಚಲಿಸದಿರೆ ನಾನಿಲ್ಲಿ ನಿಲ್ಲಬಹುದು.
ದೇವನೊಬ್ಬನೆ ಶಾಶ್ವತ; ಅವನಾಜ್ಞೆ ಅನುಲ್ಲಂಘ್ಯ.
ಲೋಕವೂ ಚಿರವಲ್ಲ; ಸೂರ್ಯ ಚಂದ್ರ ತಾರಾಳಿಗಳು
ಗಗನ ಮೇಘ ದಿವಾರಾತ್ರಿಗಳು, ರಾಜಸಂತರು ದೇವತೆಗಳು,
ಸನ್ಯಾಸಿಗಳು,
ಮಾನವರು, ವಿಧಿ ಕರ್ಮಗಳು, ಗ್ರಂಥಗಳು ಎಲ್ಲವೂ ನಶ್ವರವೆ.
ಭಗವಂತ ಮತ್ತವನ ವಾಣಿ ಮಾತ್ರವೆ ಶಾಶ್ವತಂ"

"ಯಾರನ್ನು ನಾನು ಗುರುವೆಂದು ಸ್ವೀಕರಿಸಲಿ?" ಅತ್ಯಂತ ದೀನನಾಗಿ ಆ ಪೀರ ಕೇಳಿದನು. "ನಮ್ಮೆಲ್ಲರಿಗೂ ಗುರುವಾದ ಅವನನ್ನೆ, ನಿನ್ನ ದೇವರನ್ನೆ ಸ್ವೀಕರಿಸು" ಎಂದು ನಾನಕ್ ಉತ್ತರಿಸಿದನು.

ಅಲ್ಲಿಂದ ನಾನಕ್ ಸಿಂಹಳದ ಕಡೆಗೆ ಪ್ರಯಾಣ ಮುಂದುವರಿಸಿದನು. ಭಾರತದಿಂದ ಹಿರಿಯ ಫಕೀರನೊಬ್ಬನು ಬಂದಿದ್ದಾನೆಂಬುದನ್ನು ತಿಳಿದ ರಾಜನು, ತಮ್ಮ ಸೌಂದರ್ಯದಿಂದ ಮರುಳುಗೊಳಿಸುವಂತೆ ಹಲವಾರು ಸುಂದರಿಯರನ್ನು ನಾನಕನ ಬಳಿಗಟ್ಟಿದನು. ನಾನಕ್ ಅವರನ್ನು ಕಣ್ಣೆತ್ತಿಯೂ ನೋಡಲಿಲ್ಲ. ಕೊನೆಗೆ ರಾಜನೇ—ಸಿಖ್ ಧರ್ಮಗ್ರಂಥಗಳಲ್ಲಿ ಆತ

ನನ್ನು ಶಿವನಾಭಂ ಎಂದು ಕರೆಯಲಾಗಿದೆ—ಅವನ ಬಳಿ ಬಂದು ಮಾತಾಡಿ ಸಿದನು : "ನಿನ್ನ ಹೆಸರೇನು ? ನಿನ್ನ ಕುಲ ಯಾವುದು ? ನೀನು ಯೋಗಿಯೆ ?" "ಭಗವನ್ನಾಮಸ್ಮರಣೆಯಿಂದ ಪರಿಶುದ್ಧವಾದ ಅಂತರ್ಯವನ್ನುಳ್ಳವನೇ ಯೋಗಿ. ಅವನು ಯಾವಾಗಲೂ ಭಗವಂತನ ಸತ್ಯದೊಡನೆಯೇ ಅಭಿ ರಂಜಿಸುತ್ತಾನೆ. ಅವನು ಆಗಮಿಸುವುದೂ ಇಲ್ಲ, ನಿರ್ಗಮಿಸುವುದೂ ಇಲ್ಲ. ಓ ದೇವರೆ, ನಿನ್ನ ಹೆಸರೇನು ? ನಿನ್ನ ಜಾತಿಯಾವುದು ? ನಿನ್ನ ಸನ್ನಿಧಿಗೆ ನನ್ನನ್ನು ಕರೆಸಿಕೊಂಡಾಗ ಈ ಪ್ರಶ್ನೆಗಳಿಗೆ ಉತ್ತರಿಸುವಂತೆ ನಿನ್ನನ್ನೇ ನಾನು ಕೇಳುತ್ತೇನೆ." ಎಂದು ನಾನಕ್ ಉತ್ತರವಿತ್ತನು.

ಅನಂತರ ರಾಜ ಅವನನ್ನು "ನೀನು ಬ್ರಾಹ್ಮಣನೇನು ?" ಎಂದು ಕೇಳಿ ದನು. "ದೈವಜ್ಞಾನದ ನದಿಯಲ್ಲಿ ಸ್ನಾನಮಾಡುವವನೇ ಬ್ರಾಹ್ಮಣ ; ಯಾರ ಜ್ಯೋತಿ ಮೂರು ಲೋಕಗಳಿಗೂ ವ್ಯಾಪಿಸುತ್ತದೆಯೋ ಅವನನ್ನು ಅರಿತ ವನೇ ಬ್ರಾಹ್ಮಣ" ಎಂದು ನಾನಕ್ ಪ್ರತ್ಯುತ್ತರ ಕೊಟ್ಟನು.

ರಾಜ ಮತ್ತೆ ಅವನನ್ನು ಪ್ರಶ್ನಿಸಿದನು : "ನೀನು ಖತ್ರಿಯೇನು, ವ್ಯಾಪಾರಿ ಯೇನು ?" ಅದಕ್ಕೆ ನಾನಕನ ಉತ್ತರವಿದು : "ನನ್ನ ನಾಲಗೆಯೇ ತುಲಾ ದಂಡ. ನನ್ನ ಹೃದಯವೇ ಬಟ್ಟು. ಅದರಿಂದ ನಾನು ಆ ಅಜ್ಞಾತ ನಾಮ ವನ್ನು ತೂಗಿ ನೋಡುತ್ತೇನೆ. ಇರುವುದೂ ಒಂದೇ ಒಂದು ಅಂಗಡಿ. ಇರುವವನೂ ಒಬ್ಬನೇ ಒಬ್ಬ ವ್ಯಾಪಾರಿ ; ಗ್ರಾಹಕರೆಲ್ಲರೂ ಒಂದೇ ಒಂದು ಬಗೆಯವರು."

ರಾಜ ಮತ್ತೊಂದು ಪ್ರಶ್ನೆಯನ್ನು ಹಾಕಿದನು : "ನೀನು ಹಿಂದುವೊ ಮುಸ್ಲಿಮನೊ ?" ನಾನಕ್ ಒಡನೆಯೆ ಉತ್ತರಿಸಿದನು : "ಏಕೈಕ ದೇವನಿಗೆ ಶರಣಾಗಿರುವ ನಿಜ ಗುರು ಈ ಎರಡು ಪಂಥಗಳಲ್ಲಿ ಭೇದವೇನೂ ಇಲ್ಲ ವೆಂಬುದನ್ನು ತೋರಿಸಿಕೊಟ್ಟಿದ್ದಾನೆ. ದೇವನ ಆದೇಶವನ್ನೇ ಅವನು ಸ್ಮರಿಸು ತ್ತಾನೆ ; ಸಂದೇಹಗಳನ್ನು ದೂರಮಾಡುತ್ತಾನೆ."

ಈ ಉತ್ತರಗಳಿಂದ ರಾಜ ಅತ್ಯಂತ ಪ್ರಭಾವಿತನಾದನು. ನಾನಕ್ ವರ್ಣಿಸಿದಂಥ ಸ್ಥಿತಿಯ ಬಗ್ಗೆ ಮತ್ತಷ್ಟು ವಿವರಗಳನ್ನು ಕೇಳಿದನು. ನಾನಕ್ ಅತ್ಯಂತ ಸೂಕ್ಷ್ಮವಾಗಿ ಆ ವಿವರಗಳನ್ನು ಅಭಿವ್ಯಕ್ತಪಡಿಸಿದನು.

"ದೈವಭಕ್ತ ಯಾವಾಗಲೂ ಸಮಾಧಿಸ್ಥಿತಿಯಲ್ಲಿಯೇ ಇರುತ್ತಾನೆ. ಅದು

ಒಂದು ಬಗೆಯ ಶೂನ್ಯ. ಅಲ್ಲಿ ಸುಖವೂ ಇಲ್ಲ, ಭರವಸೆಯೂ ಇಲ್ಲ, ದುಃಖವೂ ಇಲ್ಲ, ಕಾಮವೂ ಇಲ್ಲ, ಜಾತಿಯೂ ಇಲ್ಲ, ಜಾತಿ ಚಿಹ್ನೆಗಳೂ ಇಲ್ಲ, ಉಪದೇಶಗಳೂ ಇಲ್ಲ, ಮಂತ್ರಪಠನವೂ ಇಲ್ಲ, ಆತ್ಮಲೀನನಾಗಿ ಗಗನದಂತೆ ಸಮಾಹಿತ ಚಿತ್ತನಾಗಿ ಮಾನವ ಸದಾ ಧ್ಯಾನಮಗ್ನನಾಗಿರುತ್ತಾನೆ; ದೇವನನ್ನು ಕಾಣುತ್ತಾನೆ."

ನಲವತ್ತು ಪದ್ಯಗಳುಳ್ಳ, 'ಪ್ರಾಣಸಾಂಗ್ಲಿ' ಎಂದು ಹೆಸರಾಗಿರುವ ಈ ರಚನೆ ಇಂದು ಅನುಪಲಬ್ಧವಾಗಿದೆ. ಇದನ್ನು ಕೇಳಿದ ಆ ರಾಜ ಅತ್ಯಂತ ಆನಂದಿತನಾದನು. ಆ ಉತ್ಕಟಾನಂದದಲ್ಲಿ ನಾನಕನನ್ನು ತನ್ನ ಹೆಗಲ ಮೇಲೆ ಹೊತ್ತು ಲಂಕೆಯ ಬೀದಿಗಳಲ್ಲಿ ಮೆರವಣಿಗೆ ಮಾಡುವುದಾಗಿ ಹೇಳಿದನು. "ನಿನ್ನ ಭಕ್ತಿ ದೇವರಿಗೆ ಮೆಚ್ಚುಗೆಯಾಗಿದೆ" ಎಂದು ನಾನಕ್ ಅವನನ್ನು ಆಶೀರ್ವದಿಸಿದನು. ಆ ರಾಜನು ನಾನಕನ ನಿಷ್ಠಾವಂತ ಶಿಷ್ಯನಾದನು. ಪ್ರಜೆಗಳ ಸುಖಕ್ಕಾಗಿ ತನ್ನ ಸಮಸ್ತೈಶ್ವರ್ಯವನ್ನೂ ವಿನಿಯೋಗಿಸಿದನು. "ಐಹಿಕ ಭೋಗಗಳಲ್ಲಿ ನಮ್ಮ ದೊರೆಗೆ ತೃಪ್ತಿಯಿಲ್ಲ. ಅವನು ದೈವೀ ಸಂಗಿ ಹಾಗೂ ನಾನಕ್ ಸಂಗಿಯಾಗಿದ್ದಾನೆ." ಎಂದು ಅವರ ಪ್ರಜೆಗಳು ಮನಸಾರೆ ಹೊಗಳಿದರು.

ಪಂಜಾಬಿಗೆ ಹಿಂದಿರುಗಿದ ಮೇಲೆ ನಾನಕ್ ಅಚಲ್—ಬಾತಲಾದಲ್ಲಿ ಸೇರಿದ್ದ ಯೋಗಿಗಳ ಮೇಳಕ್ಕೆ ಹೋದನು. ಅವರೊಡನೆ ಚರ್ಚಿಸುವುದೇ ಅವನ ಉದ್ದೇಶವಾಗಿತ್ತು. ಅವನು ಗೃಹಸ್ಥನ ಉಡುಪು ಧರಿಸಿದ್ದನು. ನಾನಕ್‌ನನ್ನು ಕಂಡು ಅವನಿಗೆ ತಮ್ಮ ಗೌರವವನ್ನು ಅರ್ಪಿಸಬೇಕೆಂದು ಕಾತರರಾಗಿದ್ದ ಜನಗಳ ಭಾರಿ ಗುಂಪನ್ನು ಕಂಡು ಯೋಗಿಗಳು ಹೊಟ್ಟೆಕಿಚ್ಚು ಪಡಲಾರಂಭಿಸಿದರು. ಅವರ ನಾಯಕನಾದ ಭಂಗಾರನಾಥ ನಾನಕನನ್ನು ಪ್ರಶ್ನಿಸಿದನು: "ಎಲೈ ಬಾಲಕನೆ, ಹಾಲನ್ನೇಕೆ ಹುಳಿಯಿಸಿದ್ದೀಯೆ? ಸಂತನೆಂದು ಹೇಳಿಕೊಳ್ಳುವ ನೀನು ಗೃಹಸ್ಥನ ವೇಷವನ್ನೇಕೆ ಧರಿಸಿದ್ದೀಯೆ? ಜ್ಞಾನದ ನವನೀತವನ್ನು ಈ ರೀತಿಯಲ್ಲಿ ಮಥಿಸಲು ಸಾಧ್ಯವಿಲ್ಲ." ನಾನಕ್ ಆ ಯೋಗಿಗೆ ಸೂಕ್ತ ಉತ್ತರವಿತ್ತನು: "ಬುದ್ಧಿವಂತಳಲ್ಲದ ತಾಯಿ ಕಡೆಗೋಲನ್ನು ತೊಳೆಯದೆ ಹಾಲನ್ನು ಹುಳಿಯಾಗಿಸುತ್ತಾಳೆ. ಸಾಂಸಾರಿಕ ಜೀವನವನ್ನು ತ್ಯಜಿಸಿದವನೂ ಶಪಿಸಿದವನೂ ಭಿಕ್ಷೆಗಾಗಿ ಎಂದೂ ಗೃಹಸ್ಥನ

ಮನೆಯ ಬಾಗಿಲಿಗೆ ಹೋಗಬಾರದು. ಇಲ್ಲಿ ಏನೂ ಮಾಡದವನಿಗೆ ಅಲ್ಲಿಯೂ ಏನೂ ದೊರೆಯುವುದಿಲ್ಲ."

ಯೋಗಿ ಕೇಳಿದ: "ನೀನು ಪವಾಡ ಪುರುಷನೆಂದು ಪ್ರಸಿದ್ಧನಾಗಿದ್ದೀಯೆ. ನೀನು ಒಂದೆರಡು ಪವಾಡಗಳನ್ನೇಕೆ ನಮಗೆ ತೋರಿಸಬಾರದು?" ನಾನಕ್ ಉತ್ತರಿಸಿದನು: ಪವಾಡಗಳೆಲ್ಲ ಭಗವಂತನ ಅಸ್ತಿತ್ವವನ್ನು ನಿಷೇಧಿಸುವಂಥ ಕಾರ್ಯಗಳು. ಒಂದೇ ಒಂದು ಪವಾಡದಲ್ಲಿ ನನಗೆ ನಂಬಿಕೆಯಿದೆ: ದೇವರ ಹೆಸರು ಮತ್ತು ಸಂತರ ಸಹವಾಸ. ದೇವರು ತನ್ನ ನಾಮದ ಮಹಿಮೆಯ ಮೂಲಕ ಕೃಪೆಯನ್ನು ತೋರದೆ ಹೋದರೆ, ಆನಂದಧಾಮವಾಗಿರುವ ಅವನು ಆನಂದವನ್ನು ನಮಗೆ ನೀಡದೆ ಹೋದರೆ ಎಲ್ಲವೂ ವ್ಯರ್ಥ. ಅಗ್ನಿವಸನವನ್ನು ತೊಟ್ಟರೇನು? ಹಿಮಗೃಹದಲ್ಲಿ ವಾಸಿಸಿದರೇನು? ಕಬ್ಬಿಣವನ್ನು ತಿಂದರೇನು? ನನ್ನೆಲ್ಲ ನೋವನ್ನು ಪರಿಹರಿಸಿದರೇನು? ವಿಶ್ವವನ್ನೇ ನಿನ್ನ ಮುಂದೆ ತಂದೊಡ್ಡಿದರೇನು? ನಭೋಮಂಡಲವನ್ನೇ ಕಿರುಬೆರಳಿನಲ್ಲಿ ಹೊತ್ತರೇನು? ಅಸಾಧ್ಯವಾದುದನ್ನು ಮಾಡಿ ತೋರಿದರೇನು? ದೈವಕೃಪೆ ದೊರೆಯದ ಹೊರತು ಎಲ್ಲವೂ ವ್ಯರ್ಥ."

ಸಮಾಧಿಸ್ಥಿತಿಯನ್ನುಂಟುಮಾಡಲು ನಾನಕನಿಗೆ ಮನೆಯಲ್ಲೇ ತಯಾರಿಸಿದ ಮದ್ಯವನ್ನು ನೀಡಲಾಯಿತಂತೆ. "ದೇವರ ಅರಿವನ್ನು ಪಡೆದಿರುವವನು ದೇವರ ಧ್ಯಾನದಲ್ಲಿ ನಿರತನಾಗಿರುವವನು, ಒಳ್ಳೆಯದನ್ನೇ ಮಾಡುತ್ತಾನೆ; ದೇವರನ್ನು ಪ್ರೀತಿಸುವವನು ಯಾವಾಗಲೂ ಮತ್ತನಾಗಿಯೇ ಇರುತ್ತಾನೆ, ಸಮಾಧಿಸ್ಥಿತಿಯಲ್ಲಿಯೇ ಇರುತ್ತಾನೆ." ಎಂದು ನಾನಕ್ ಅದನ್ನು ತಿರಸ್ಕರಿಸಿದನು.

"ನಿನ್ನ ಅಭಿಪ್ರಾಯದಲ್ಲಿ ಯಾರು ಋಷಿ ಎಂಬ ಹೆಸರಿಗೆ ಅರ್ಹನಾಗುತ್ತಾನೆ?" ಎಂದು ಕೇಳಿದ ಯೋಗಿಗೆ ನಾನಕ್ ಕೊಟ್ಟ ಉತ್ತರವಿದು: "ಯಾರು ಜ್ಞಾನಖಡ್ಗದಿಂದ ಪಂಚ ವಿಕಾರಗಳೊಡನೆ (ಕಾಮ, ಕ್ರೋಧ, ಲೋಭ, ಮದ, ಮೋಹ) ಸೆಣಸುತ್ತಾನೆಯೋ, ಕ್ರಿಯೆಯ ಹತ್ತು ಅಂಗಗಳನ್ನೂ ಅನುಭವ ಕ್ರಿಯೆಯ ಐದು ಅಂಗಗಳನ್ನೂ ಅರಿತಿದ್ದಾನೆಯೋ, ಯಾರ ಮನಸ್ಸಿನಲ್ಲಿ ದೇವರೇ ತುಂಬಿಕೊಂಡಿರುತ್ತಾನೆಯೋ, ಯಾರು ವರ್ಷಾದ್ಯಂತವೂ ತನ್ನೊಳಗೇ ಯಾತ್ರೆಯನ್ನು ಕೈಗೊಳ್ಳುತ್ತಾನೆಯೋ,

ಯಾರು ತನ್ನ ಹೃದಯದ ಅಹಂಕಾರವನ್ನು ತೊಡೆದುಹಾಕುತ್ತಾನೆಯೋ ಅವನೇ ನಿಜವಾದ ಋಷಿ."

ಯೋಗಿಗಳು ತಮ್ಮ ಪಂಥಕ್ಕೆ ಸೇರಬೇಕೆಂದು ನಾನಕನನ್ನು ಆಹ್ವಾನಿಸಿದರು. ಯೋಗದಿಂದಲ್ಲದೆ ಮೋಕ್ಷ ದೊರೆಯುವುದಿಲ್ಲವೆಂಬುದು ಅವರ ಅಭಿಪ್ರಾಯವಾಗಿತ್ತು. "ಚಿಂದಿ ಬಟ್ಟೆ ಹಾಕಿಕೊಳ್ಳುವುದರಿಂದ, ಕುಂಡಲ ಧರಿಸುವುದರಿಂದ, ಜೋಳಿಗೆಯಿಂದ, ದಂಡಧಾರಣೆಯಿಂದ, ಅಥವಾ ಜಿಂಕೆಯ ಕೊಂಬನ್ನು ಸಿಕ್ಕಿಸಿಕೊಳ್ಳುವುದರಿಂದ ಯಾರೂ ಯೋಗಿಯಾಗಲಾರರು. ನನ್ನ ದೃಷ್ಟಿಯಲ್ಲಿ ಯಾರು ಪಂಚವಿಕಾರಗಳನ್ನು ನಿಯಂತ್ರಿಸಬಲ್ಲನೋ, ನಿದ್ರಾಹಾರಗಳಲ್ಲಿ ಮಿತವಾಗಿರುತ್ತಾನೊ, ದೇವರಲ್ಲಿ ಅನನ್ಯ ಭಕ್ತಿಯನ್ನಿಟ್ಟು ಕೊಂಡಿರುತ್ತಾನೋ, ಕಾಮದಲ್ಲಿ ಸಂಯಮಿಯಾಗಿರುತ್ತಾನೋ, ಜ್ಞಾನೋಪಾಸನೆಯಲ್ಲಿ ನಿರತನಾಗಿರುತ್ತಾನೆಯೋ ಮತ್ತು ಈ ಎಲ್ಲ ಕ್ರಿಯೆಗಳಿಂದ ಶರೀರವನ್ನೂ ಮನಸ್ಸನ್ನೂ ಶುದ್ಧವಾಗಿರಿಸಿಕೊಳ್ಳುತ್ತಾನೆಯೋ, ದೇವರಿಂದ ಬಂದದ್ದೆಲ್ಲ ಒಳ್ಳೆಯದೆಂದು ಸ್ವೀಕರಿಸುತ್ತಾನೆಯೋ, ಅವನೇ ಒಳ್ಳೆಯವನು, ಅವನೇ ಯೋಗಿ. ಆಗ ದೈವವಾಣಿಯು ಅನಹದನಾದ ಅವನ ಅಸ್ತಿತ್ವದಲ್ಲೆಲ್ಲಾ ಮೊಳಗುತ್ತದೆ" ಎಂದು ನಾನಕ್ ಅವರಿಗೆ ಸಮಾಧಾನ ನೀಡಿದನು.

ಇಲ್ಲಿಂದ ನಾನಕ್ ಕಾಶ್ಮೀರಕ್ಕೆ ಪ್ರಯಾಣ ಬೆಳೆಸಿದನು. ಈ ಪ್ರಯಾಣದಲ್ಲಿ ಹಿಂದೂ ಭಕ್ತನಂತೆ ಅವನು ಪಾದರಕ್ಷೆಯನ್ನೂ, ಚರ್ಮದ ಟೋಪಿಯನ್ನೂ ಧರಿಸಿ, ಸೊಂಟಕ್ಕೊಂದು ಹುರಿ ಸುತ್ತಿಕೊಂಡು, ಹಣೆಯ ಮೇಲೆ ಕೇಸರಿ ಮುದ್ರೆ ಹಾಕಿಕೊಂಡಿದ್ದನು. ಹಸ್ಸು ಎಂಬ ಕಮ್ಮಾರನೂ, ಸಿಹಾನ್ ಎಂಬ ಕ್ಯಾಲಿಕೋ ಮುದ್ರಕನೂ ನಾನಕನ ಜೊತೆಗಿದ್ದರು. ಅವರು ಶ್ರೀನಗರದಲ್ಲಿ ಪ್ರಸಿದ್ಧ ಬ್ರಾಹ್ಮಣನೊಬ್ಬನನ್ನು ಭೇಟಿಮಾಡಿದರು. ಅವನೇ ಬ್ರಹ್ಮದಾಸ. ಎರಡು ಕತ್ತೆ ಹೇರಿನಷ್ಟು ಸಂಸ್ಕೃತ ಪುಸ್ತಕಗಳೊಡನೆ ಬಂದು ಅವನು ನಾನಕನನ್ನು ಸ್ವಾಗತಿಸಿದನು. ತನ್ನ ಧಾರ್ಮಿಕಶ್ರದ್ಧೆಯ ಕುರುಹಾಗಿ ಅವನು ಸಾಲಿಗ್ರಾಮವೊಂದನ್ನು ಕತ್ತಿಗೆ ಕಟ್ಟಿಕೊಂಡಿದ್ದನು. ಅಸಾಮಾನ್ಯ ವೇಷವನ್ನು ಧರಿಸಿದ್ದ ಗುರುವನ್ನು ಕುರಿತು ಬ್ರಹ್ಮದಾಸ "ನೀನೆಂಥ ಫಕೀರ? ಸಂತರಿಗೆ ನಿಷೇಧಿಸಲಾಗಿರುವ ಚರ್ಮವನ್ನು ಧರಿಸಿದ್ದೀಯೆ? ನಿನ್ನ ಸೊಂಟದ ಸುತ್ತ

ಹಗ್ಗವನ್ನೇಕೆ ಬಿಗಿದುಕೊಂಡಿದ್ದೀಯೆ? ನಿನ್ನ ಪಂಥ ಯಾವುದು?" ಎಂದು ಪ್ರಶ್ನಿಸಿದನು.

"ಆ ಏಕೈಕ ಬಾಗಿಲಬಳಿಗೆ ನಮ್ಮನ್ನೊಯ್ಯಲು ಇರುವುದೊಂದೇ ಒಂದು ದಾರಿ. ನಿಜವಾದ ಗುರುವಿನ ಜ್ಞಾನ ಎಲ್ಲರಿಗೂ ಆ ದಾರಿಯನ್ನು ತೋರುತ್ತದೆ" ಎಂದು ನಾನಕ್ ಉತ್ತರಿಸಿದನು. "ಈ ವಿಶ್ವ ಹೇಗೆ ಸೃಷ್ಟಿಯಾಯಿತು? ಆದಿಯಲ್ಲಿ ಏನಿತ್ತು, ಏನಿರಲಿಲ್ಲ ಎಂಬುದು ನಿನಗೆ ಗೊತ್ತೆ?" ಎಂಬ ಬ್ರಹ್ಮದಾಸನ ಎರಡನೆಯ ಪ್ರಶ್ನೆಗೆ ನಾನಕ್ ಕೊಟ್ಟ ಉತ್ತರವಿದು:

"ಆದಿಯಲಿ ಅಂಧಕಾರವೆ ತುಂಬಿಕೊಂಡಿತ್ತು.

ಪ್ರಳಯದ ಮೇಲೆ ಪ್ರಳಯಗಳಾಗುತ್ತಿದ್ದುವು.

ಆಗ ಭೂಮಿಯೂ ಇರಲಿಲ್ಲ. ಸ್ವರ್ಗವೂ ಇರಲಿಲ್ಲ; ಅವರ್ಣನೀಯವೂ ಅದ್ಭುತವೂ ಆದ ದೈವಸಂಕಲ್ಪ ಹೊರತು ಬೇರೇನೂ ಇರಲಿಲ್ಲ.

ಹಗಲು ರಾತ್ರಿಗಳಾಗಲಿ, ಸೂರ್ಯಚಂದ್ರರಾಗಲಿ ಇರಲಿಲ್ಲ. ಶೂನ್ಯದಲಿ ಆತ್ಮಲೀನನಾಗಿ ಧ್ಯಾನನಿರತನಾಗಿದ್ದ ದೇವನೊಬ್ಬನೇ ಇದ್ದ.

ವಾಯುವಾಗಲಿ, ಜಲವಾಗಲಿ, ಸೃಷ್ಟಿಮೂಲವಾಗಲಿ, ವಾಙ್ಮೂಲವಾಗಲಿ, ಯಾವುದೂ ಇರಲಿಲ್ಲ.

ಸೃಷ್ಟಿಲಯಗಳಾಗಲಿ, ಖಂಡಗಳಾಗಲಿ, ಸ್ವರ್ಗ ನರಕಗಳಾಗಲಿ, ಈ ಲೋಕವಾಗಲಿ, ಅಧೋಲೋಕವಾಗಲಿ ಇರಲಿಲ್ಲ.

ಬ್ರಹ್ಮನಾಗಲಿ, ಶಿವನಾಗಲಿ, ವಿಷ್ಣುವಾಗಲಿ ಇರಲಿಲ್ಲ. ನನ್ನ ದೇವನೊಬ್ಬನೇ ಇದ್ದ.

ಕರ್ಮಗಳಾಗಲಿ, ತಪಸ್ಸುಗಳಾಗಲಿ, ಪವಿತ್ರ ಗ್ರಂಥಗಳಾಗಲಿ, ಯೋಗಗಳಾಗಲಿ, ಮಂತ್ರಗಳಾಗಲಿ, ಡಾಂಭಿಕತೆಯಾಗಲಿ ಈ ಅನ್ಯಾನ್ಯ ಪಂಥಗಳಾಗಲಿ ಇರಲಿಲ್ಲ.

ಜಾತಿಯಾಗಲಿ, ಅಹಂಕಾರವಾಗಲಿ, ಜೀವನ ಮರಣಗಳಾಗಲಿ, ಮಾನವನಾಗಲಿ, ಆತ್ಮವಾಗಲಿ, ರಾಜನಾಗಲಿ, ಪ್ರಜೆಯಾಗಲಿ ಇರಲಿಲ್ಲ.

ಅವನಿಗೆ ಬೇಕೆನಿಸಿದಾಗ, ಬೇಕೆನಿಸಿದಂತೆ ಈ ವಿಶ್ವವನ್ನೂ ನಾವು ಕಾಣುತ್ತಿರುವುದೆಲ್ಲವನ್ನೂ ನಂಬುವುದೆಲ್ಲವನ್ನೂ ಸೃಷ್ಟಿಸಿದನು."

ಆ ಪಂಡಿತನಿಗೆ ಇನ್ನೂ ಜ್ಞಾನದ ಅಹಂಕಾರವಿತ್ತು. ನಾನಕನ ಉಪದೇಶದಿಂದ ಪ್ರಭಾವಿತನಾದರೂ, ತನ್ನ ಉಪದೇಶಕ್ಕೆ ವಿರುದ್ಧವಾದ ಉಪದೇಶದಿಂದ ಅವನಿಗೆ ನೋವಾಗುತ್ತಿತ್ತು. ಅವನ ಅಂತರ್ಯದ ತುಮುಲವನ್ನು ಗ್ರಹಿಸಿದ ನಾನಕ್ ಗುರುವೆಂದು ಯಾರಾದರೊಬ್ಬನನ್ನು ಸ್ವೀಕರಿಸುವಂತೆ ಹೇಳಿದನು. "ನನಗೆ ಯಾರು ತಾನೆ ಗುರುವಾಗಲು ಸಾಧ್ಯ ? ತಿಳಿಯಬೇಕಾದುದೆಲ್ಲವನ್ನೂ ನಾನು ತಿಳಿದಿದ್ದೇನೆ" ಎಂದು ಜಂಬದಿಂದ ಪಂಡಿತ ನುಡಿದನು. ಆಗ ನಾನಕ್ ಕಾಡಿನಲ್ಲಿರುವ ಒಂದು ಮನೆಯಲ್ಲಿ ನಾಲ್ವರು ಫಕೀರರಿದ್ದಾರೆಂದೂ, ಆತನಿಗೆ ಯಾರು ಗುರುವಾಗಬಲ್ಲದೆಂಬುದನ್ನು ಅವರು ತಿಳಿಸುವರೆಂದೂ ಹೇಳಿದನು. ಪಂಡಿತನು "ಹಾಗೇ ಆಗಲಿ" ಎಂದು ಹೇಳಿ ಆ ಮನೆಯತ್ತ ಹೊರಟನು. ಫಕೀರರು ಒಂದು ದೇವಸ್ಥಾನದತ್ತ ಕೈದೋರಿ ಅಲ್ಲಿ ಅವನು ತನ್ನ ಗುರುವನ್ನು ಕಾಣಬಹುದೆಂದು ಸೂಚಿಸಿದರು. ಬ್ರಹ್ಮದಾಸ ಅಲ್ಲಿಗೆ ಹೋದಾಗ ಅತ್ಯಂತ ಸುಂದರಿಯಾದ ನಗ್ನ ಯುವತಿಯೊಬ್ಬಳನ್ನು ಕಂಡನು. ಅವನನ್ನು ಸ್ವಾಗತಿಸುವ ಬದಲು ಅವಳು ಅವನನ್ನು ತಿರಸ್ಕರಿಸಿದಳು. ಫಕೀರರಿಗೆ ಈ ಕಥೆಯನ್ನು ವಿವರಿಸಿ ಹೇಳಿದಾಗ ಅವರು ಈ ರೀತಿ ನುಡಿದರು : "ಆ ಹೆಣ್ಣೇ ಮಾಯೆ. ನಿನ್ನ ಮನಸ್ಸು ಆಕೆಯಲ್ಲಿ ನಾಟಿದೆ. ಆದ್ದರಿಂದಲೇ ನಿನಗೆ ಮನಃಶಾಂತಿ ದೊರೆಯುತ್ತಿಲ್ಲ." ಈ ಘಟನೆ ವಿದ್ವಾಂಸನ ಆತ್ಮಾನ್ವೇಷಣೆಗೆ ನಾಂದಿಯಾಯಿತು. ಆಧ್ಯಾತ್ಮಿಕ ಉಪದೇಶ ನೀಡುವಂತೆ ಅವನು ನಾನಕನನ್ನು ಕೇಳಿಕೊಂಡನು. "ಆ ಪಾಂಡಿತ್ಯ ಜ್ಞಾನವಲ್ಲ. ಜ್ಞಾನ ಅನುಭವಲಬ್ಧವಾದದ್ದು. ಆಧ್ಯಾತ್ಮಿಕ ಸಾಧನೆಯಿಂದ ಲಬ್ಧವಾದ ಅನುಭವ ನಿರಾಸಕ್ತವೂ, ವಿನಯಪೂರ್ಣವೂ ಆಗಿದ್ದಲ್ಲಿ, ಅದರಿಂದ ದೈವಕೃಪೆ ದೊರೆಯುತ್ತದೆ" ಎಂದು ನಾನಕ್ ಆತನಿಗೆ ಉಪದೇಶಿಸಿದನು.

ಹೀಗೆ ಅಹಂಭಾವವೆಲ್ಲ ಅಡಗಿಹೋದಮೇಲೆ ಆ ಬ್ರಾಹ್ಮಣ ಧ್ಯಾನಕ್ಕೂ, ನಿಸ್ವಾರ್ಥ ಸೇವೆಗೂ ತನ್ನ ಬದುಕನ್ನು ಮೀಸಲಾಗಿರಿಸಿದನು.

ಪರ್ವತ ಶಿಖರಗಳನ್ನು ಒಂದೊಂದಾಗಿ ದಾಟುತ್ತಾ ನಾನಕ್ ಸುಮೇರು ಪರ್ವತವನ್ನು ತಲುಪಿದನು. ಅಲ್ಲಿ ಪವಾಡಪುರುಷರೆಂದೂ, ಚಿರಾಯುಗಳೆಂದೂ ದೇಶಾದ್ಯಂತ ಪ್ರಸಿದ್ಧರಾಗಿದ್ದ ಪ್ರಖ್ಯಾತ ಸಿದ್ಧರನ್ನು ಕಂಡನು. ಯಾವ ಸ್ಥಿತಿಯಲ್ಲಿ ತಾನು ದೇಶವನ್ನು ಬಿಟ್ಟು ಬಂದನೆಂಬುದನ್ನೂ ಜನರು

ಹೇಗೆ ಬದುಕುತ್ತಿದ್ದಾರೆಂಬುದನ್ನೂ ಅವನಿಂದ ಕೇಳಿ ತಿಳಿದುಕೊಳ್ಳಲು ಅವರು ಆಶಿಸಿದರು. ಗುರು ಅದಕ್ಕುತ್ತರವಾಗಿ ನುಡಿದನು:

"ಕಲಿಯುಗವೆ ಕತ್ತಿ, ರಾಜರೇ ಕಟುಕರು,
ನ್ಯಾಯವೆಂಬುದು ಹಾರಿಹೋಗಿದೆ.
ಮಿಥ್ಯಾಂಧಕಾರವೆ ತುಂಬಿಕೊಂಡಿದೆ.
ಸತ್ಯಶಶಿ ಎಂದಾದರೊಮ್ಮೆ ಮೂಡುವನೆ
ಎಂಬುದೂ ಯಾರಿಗೂ ತಿಳಿದಿಲ್ಲ.
ಪ್ರಜೆಗಳೋ ಕುರುಡರು ; ಬೇಬುದ್ಧಿಯವರದರಿಂದ
ವಿಧೇಯರು ಮಿಥ್ಯೆಯನೆ ನಂಬಿ ಬಾಳ್ವರು.
ಗುರು ಕುಣಿಯುವನು ಶಿಷ್ಯಕೋಟಿಯ ತಾಳವನನುಸರಿಸಿ.
ಕೈ ಬೆಚ್ಚನಾದರೆ ಸಾಕು ಕಾಜಿಗಳು ನ್ಯಾಯ ಸಲಿಸುವರು.
ಸ್ತ್ರೀ ಪುರುಷರನು ಬಂಧಿಸಿರುವುದು ಹಣ ಹೊರತು ಪ್ರೇಮವಲ್ಲ."

ಅನಂತರ ಆ ಸಿದ್ಧರು ಪ್ರಶ್ನಿಸಿದರು: "ನಿನ್ನ ಹೆಸರೇನು? ನಿನ್ನ ಪಂಥ ಯಾವುದು? ನಿನ್ನ ಧ್ಯಾನವಸ್ತು ಯಾವುದು? ನೀನು ಎಲ್ಲಿ ವಾಸವಾಗಿದ್ದೀಯೆ? ಎಲ್ಲಿಂದ ಬಂದೆ? ಎಲ್ಲಿಗೆ ಹೋಗುತ್ತಿದ್ದೀಯೆ?"

ನಾನಕ್ ಉತ್ತರಿಸಿದನು: "ನಾನು ಎಲ್ಲರ ಹೃದಯಗಳಲ್ಲಿಯೂ ಇರುವ, ಆ ದೇವನಲ್ಲಿ ವಾಸಿಸುತ್ತಿದ್ದೇನೆ. ನಿಜವಾದ ಗುರುವಿನ ಆದೇಶದಂತೆ ನಾನು ವರ್ತಿಸುತ್ತಿದ್ದೇನೆ. ದೇವರ ಸಂಕಲ್ಪದಂತೆ ನಾನಿಲ್ಲಿ ಬಂದಿದ್ದೇನೆ. ಅವನ ಆಜ್ಞೆಯಾದೊಡನೆಯೇ ಇಲ್ಲಿಂದ ತೆರಳುತ್ತೇನೆ. ಆ ದೇವನ ಧ್ಯಾನವೆ ನನ್ನ ಏಕೈಕ ಹಂಬಲ ತನ್ನ ತಾನರಿತವನು ಹೀಗೆ ಮಾಡುತ್ತಾನೆ, ಆ ಪರಮ ಸತ್ಯದಲ್ಲಿ ಒಂದಾಗುತ್ತಾನೆ."

ಸಿದ್ಧರು ಮತ್ತೆ ಈ ರೀತಿ ಕೇಳಿದರು: "ವಿಶ್ವವೊಂದು ಸಾಗರವೆಂಬುದೂ, ಅದನ್ನು ದಾಟಲು ಸಾಧ್ಯವಿಲ್ಲವೆಂಬುದೂ ನಿನಗೆ ಗೊತ್ತಿಲ್ಲವೆ? ಆ ಬಂಧನದಿಂದ ಬಿಡಿಸಿಕೊಳ್ಳಲಾರದವನು ಮುಳುಗಿಹೋಗುತ್ತಾನೆ."

ನಾನಕ್ ಉತ್ತರವಿತ್ತನು: ಕಮಲದಂತೆ ಅಥವಾ ನೀರಹಕ್ಕಿಯಂತೆ ನಾನು ನೀರಿನಲ್ಲಿರುತ್ತೇನೆ. ಆದ್ದರಿಂದ ನಾನು ಮುಳುಗುವುದಿಲ್ಲ. ದೇವವಾಣಿಯನ್ನು

ಧ್ಯಾನಿಸುವ ಮತ್ತು ಕಾಮಾವೃತ ವಿಶ್ವದಲ್ಲಿ ಕಾಮರಹಿತನಾಗಿ ಬಾಳುವ ವ್ಯಕ್ತಿ ಸುಖದುಃಖಾದಿಗಳಿಂದ ವಿಚಲಿತನಾಗುವುದಿಲ್ಲ. ಅಂತವನಿಗೆ ಆಗಮನ ನಿರ್ಗಮನಗಳಿಲ್ಲ."

ಅವನ ಮಾತಿನ ಸತ್ಯವನ್ನು ಸಿದ್ಧರು ಒಪ್ಪಿಕೊಂಡರು. ಇಲ್ಲಿಯೇ ನಾನಕ್ ತನ್ನ 'ಸಿದ್ಧಗೋಷ್ಠಿ'ಯೆಂಬ ತಾತ್ವಿಕ ಗ್ರಂಥವನ್ನು ರಚಿಸಿದನೆಂದು ಹೇಳ ಲಾಗಿದೆ. ನಾನಕ್ ಪಂಥದ ಮೂಲತತ್ತ್ವಗಳಿಗೆಲ್ಲ ಇದೇ ಆಕರವಾಗಿದೆ.

ಹಿಂದಿರುಗುವಾಗ ನಾನಕ್ ಹಸನ್ ಅಬ್ದುಲ್ ಎಂಬಲ್ಲಿಗೆ ಭೇಟಿಯಿತ್ತನು. ಇದು ಮುಸ್ಲಿಮರ ದೇವಾಯತನ. ಆಗ ಕಾಂದ್‌ಹಾರದ ಅನುಭಾವಿ ಸಂತ ನಾದ ವಲೀಕಾಂದಹಾರಿ ಎಂಬುವನು ಅಲ್ಲಿಯ ಧರ್ಮಾಧಿಕಾರಿಯಾಗಿದ್ದನು. ಅವನಿಗೆ ತನ್ನ ಜ್ಞಾನ ಮತ್ತು ಪವಾಡಗಳ ವಿಚಾರದಲ್ಲಿ ತುಂಬ ಅಭಿಮಾನ ವಿತ್ತು. ಅಲ್ಲಿಗೆ ಬಂದಾಗ ಮರ್ದನನಿಗೆ ತುಂಬ ಬಾಯಾರಿಕೆಯಾಗಿತ್ತು. ವಲೀ ವಾಸವಾಗಿದ್ದ ಬೆಟ್ಟದ ತುದಿಯಲ್ಲಿ ಬಿಟ್ಟರೆ, ಬೇರೆಲ್ಲೂ ನೀರಿರಲಿಲ್ಲ. ಮರ್ದನ ಅವನ ಬಳಿ ಹೋಗಿ ನೀರು ಕೇಳಿದನು. ಆದರೆ ಅವನು ಕಾಫಿರನಾದುದರಿಂದ ಅವನಿಗೆ ನೀರು ಕೊಡುವುದಿಲ್ಲವೆಂದು ವಲೀ ಹೇಳಿದನು. ಏನೂ ಗೊತ್ತಿಲ್ಲ ದವನಂತೆ, ನಿನ್ನ ಜೊತೆಯಲ್ಲಿ ಮತ್ತೊಬ್ಬ ಹಿರಿಯ ಹಿಂದೂ ಸಂತ ಇರ ಬೇಕಲ್ಲವೆ ಎಂದು ಕೇಳಿದನು. "ಅವರಲ್ಲಿ ಅಲೌಕಿಕ ಶಕ್ತಿಗಳಿಲ್ಲದಿದ್ದರೆ ಅವನನ್ನು ಗುರುವೆಂದೇಕೆ ಕರೆಯುತ್ತೀಯೆ ? ಅವನಲ್ಲಿ ಅಂತಹ ಶಕ್ತಿ ಇದ್ದರೆ ಎಲ್ಲಿ ಬೇಕಾದರೆ ಅಲ್ಲಿ ಅವನು ನೀರನ್ನು ತಂದೊದಗಿಸಬಹುದು" ಎಂದು ಹೀಯಾಳಿಸಿದನು. ವ್ಯಾಕುಲಚಿತ್ತನಾಗಿ ಹಿಂದಿರುಗಿದ ಮರ್ದನ ಈ ಸಂಗತಿ ಯನ್ನು ಗುರುವಿಗೆ ತಿಳಿಸಿದನು. ಒಂದು ಕ್ಷಣಕಾಲ ಯೋಚಿಸಿದ ಬಳಿಕ, ನಾನಕ್ ನೆಲವನ್ನಗೆಯುವಂತೆ ಸೂಚಿಸಿದನು. ತನ್ನ ಗುರುವಿನ ನೆರವಿನಿಂದ ಒಂದು ದೊಡ್ಡ ಬಂಡೆಯನ್ನು ಅತ್ತ ಸರಿಸಿದುದೇ ತಡ ನೀರಿನ ಬುಗ್ಗೆ ಚಿಮ್ಮಿ ಬಂತು. ಆ ಮುಸ್ಲಿಮ್ ಸಂತನಿಗೆ ತುಂಬ ಕಸಿವಿಸಿಯಾಯಿತು. ದೊಡ್ಡ ಕಲ್ಲೊಂದನ್ನು ಅವನು ಅವರತ್ತ ಎಸೆದನು. ಬಲ ಅಂಗೈಯನ್ನೊಡ್ಡಿ ಗುರು ಅದನ್ನು ತಡೆಹಿಡಿದನು. ಈ ಘಟನೆಯ ಸ್ಮಾರಕವೆಂಬಂತೆ ಅವನ ಅಂಗೈ ಗುರುತುಳ್ಳ ಬಂಡೆಯೊಂದು ಇಂದೂ ಹಸನ್ ಅಬ್ದುಲ್‌ನಲ್ಲಿ ಕಾಣದೊರೆಯು ತ್ತದೆ. 'ಪಂಜಾಸಾಹಿಬ್' (ಅಂದರೆ ಪವಿತ್ರ ಕರ) ಎಂಬುದು ಇದಕ್ಕೆ ಜನರು

ಕೊಟ್ಟಿರುವ ಹೆಸರು. ತೊಳಗುವ ನೀರಿನ ಚಿಲುಮೆಯ ತಲೆಯ ಮೇಲೆ ಈ ಕಲ್ಲಿದೆ. ಇದು ಪಾಕೀಸ್ಥಾನದ ಇಂದಿನ ರಾಜಧಾನಿಯಾದ ರಾವಲ್ಪಿಂಡಿಯಿಂದ ಮೂವತ್ತು ಮೈಲಿಗಳ ದೂರದಲ್ಲಿದೆ. ಎಲ್ಲ ಧಾರ್ಮಿಕ ಸಮುದಾಯಗಳೂ ಇದಕ್ಕೆ ತುಂಬ ಗೌರವ ತೋರುತ್ತವೆ. ಇದು ನಾನಕನ ಅಂಗೈ ಗುರುತೆಂದು ನಂಬಲಾಗಿದೆ. ಇಂದಿಗೂ ಇದು ಒಂದು ಯಾತ್ರಾಸ್ಥಳವಾಗಿಯೇ ಇದೆ. ವೈಶಾಖಿಯಂದು (13 ಏಪ್ರಿಲ್) ಇಲ್ಲಿ ಒಂದು ದೊಡ್ಡ ಜಾತ್ರೆ ಸೇರುತ್ತದೆ. ದೂರದೂರದಿಂದ ಹಿಂದೂಗಳೂ ಸಿಖ್ಖರೂ ಇಲ್ಲಿಗೆ ಆಗಮಿಸುತ್ತಾರೆ.

೬

"ಕಣ್ ತಿರುಗಿದತ್ತ ನೀನಲ್ಲದೆ ಬೇರಾರೂ ಕಾಣಿಸರು."

—ಗುರು ನಾನಕ್

ನಾನಕನ ಕೊನೆಯ ಪ್ರವಾಸ ಮೆಕ್ಕ ಮದೀನ ಮತ್ತು ಮೆಸೊಪೊಟೇಮಿಯಗಳ ಕಡೆಗೆ ಸಾಗಿತು. ಮರ್ದನ ಅವನ ಜೊತೆಗಿದ್ದನು. ಮುಸ್ಲಿಂ ಹಾಜಿಯಂತೆ ನಾನಕ್ ನೀಲಿಯುಡುಪು ಧರಿಸಿದ್ದನು. ಶುಚಿಕಾರ್ಯಕ್ಕಾಗಿ ಮಣ್ಣಿನ ಮೊಗೆಯೊಂದು ಅವನ ಕೈಯಲ್ಲಿತ್ತು. ಕಂಕುಳಲ್ಲಿ ಪವಿತ್ರ ಗ್ರಂಥವೂ ಪೂಜಾ ಚಾಪೆಯೂ ಇದ್ದುವು. ಅನುಕೂಲವಾದಾಗಲೆಲ್ಲ ಸಾಂಪ್ರದಾಯಿಕ ಮುಸ್ಲಿಮನಂತೆ ಪ್ರಾರ್ಥನೆ ಸಲ್ಲಿಸುತ್ತಿದ್ದನು. ಮಕ್ಕಾ ಪವಿತ್ರಯಾತ್ರೆ ಮುಸ್ಲಿಮ್ ಮತೀಯರಲ್ಲದವರಿಗೆ ನಿರೋಧವಾಗಿತ್ತು. ಆದ್ದರಿಂದ ಅವನು ಯಾರಿಗೂ ತನ್ನ ಚಹರೆಯನ್ನು ತೋರ್ಪಡಿಸಿಕೊಳ್ಳಲಿಲ್ಲ.

ಮೆಕ್ಕಾ ತಲುಪುವ ಹೊತ್ತಿಗೆ ಅವನು ಆಯಾಸಗೊಂಡಿದ್ದನು, ಅಲ್ಲದೆ ಅವನ ಕಾಲಿನಲ್ಲಿ ಹೊಪ್ಪಳಿಯೆದ್ದಿತು. ರಾತ್ರಿ ಪವಿತ್ರ ಕಾಬಾದ ಕಡೆಗೆ ಕಾಲುಚಾಚಿ ಮಲಗಿದನು. ಅದು ದೈವದ್ರೋಹವೆಂದು ಪರಿಗಣಿತವಾಗಿದ್ದಷ್ಟರಿಂದ ಯಾವ ಮುಸ್ಲಿಮನೂ ಹಾಗೆ ಮಲಗುತ್ತಿರಲಿಲ್ಲ. ಈ ದ್ರೋಹ ಕಾರ್ಯದಿಂದ ಕುಪಿತನಾದ ಅರಬ್ಬಿ ಪುರೋಹಿತ "ಏನೆಲ ದೈವ ದ್ರೋಹಿ, ದೇವಾಲಯದ ಕಡೆಗೆ ನೀನು ಕಾಲು ಚಾಚಿಕೊಂಡಿರುವುದು ತಿಳಿಯದೆ?" ಎಂದು ಅವನನ್ನೊದೆದನು. "ದೇವರಿಲ್ಲದ ಕಡೆಗೆ ನನ್ನ ಕಾಲು ತಿರುಗಿಸು" ಎಂದು ಗುರು ಅತ್ಯಂತ ಶಾಂತಿಯಿಂದ ಉತ್ತರಿಸಿದನು. ಮುಲ್ಲಾ ಅವನ ಕಾಲನ್ನು ಮತ್ತೊಂದು ದಿಕ್ಕಿಗೆ ತಿರುಗಿಸಿದನು. ಆದರೆ ಆ ಕಡೆಯೂ ಅವನಿಗೆ ಭಗವದ್ದರ್ಶನವಾದಂತಾಯಿತು.[1] ಇದರಿಂದ ಪುರೋಹಿತ ವಿಸ್ಮಯಚಕಿತನಾಗಿ "ಅಲ್ಲಾ ಅಲ್ಲಾ, ಇವನೊಬ್ಬ ಪವಾಡ ಪುರುಷ. ಇವನಿಂದ ಜನರಿಗೆ ಅರಿವು

[1] ನಾನಕನ ಕಾಲುಗಳನ್ನು ಯಾವ ಕಡೆಗೆಳೆದರೂ ಆ ಕಡೆಗೆ ಮೆಕ್ಕ ಚಲಿಸುತ್ತಿದ್ದಂತೆ ಸಿಖ್ಖರ ಇತಿಹಾಸ ತಿಳಿಸುತ್ತದೆ.

ಮಾಡುತ್ತದೆ." ಎಂದು ಕೂಗಿಕೊಂಡನು. ಈ ಮಹಾಗುರು ಎಲ್ಲಿಂದಲೋ ದೈವೀತೇಜಸನ್ನು ಹೊರಸೂಸುತ್ತ, ಪವಾಡಗಳನ್ನು ಮೆರೆಯುತ್ತ ಬಂದಿದ್ದಾನೆ" ಎಂದವನು ತನ್ನ ಸಂಗಡಿಗರಿಗೆ ಈ ಘಟನೆಯನ್ನು ವಿವರಿಸಿದನು. ಅವರು ಅವನ ಸುತ್ತ ಮುತ್ತಿಕೊಂಡರು. ಅವರಲ್ಲೊಬ್ಬ "ಹಿಂದೂ ಮತ್ತು ಮುಸ್ಲಿಮರಲ್ಲಿ ಯಾರು ದೊಡ್ಡವರು ಹೇಳು" ಎಂದು ಕೇಳಿದನು. "ಸದಾ ಒಳ್ಳೆಯದನ್ನು ಮಾಡುತ್ತ ಭಗವಧ್ಯಾನ ನಿರತನಾಗಿರುವವನು" ಎಂದು ಗುರು ಉತ್ತರಿಸಿದನು.

"ರಮ್‌ಜಾನ್ ತಿಂಗಳಲ್ಲಿ ಉಪವಾಸಮಾಡುವಿಯಾ ?" ಎಂದವರು ಅವನನ್ನು ಪ್ರಶ್ನಿಸಿದರು. "ದಿನಾಲೂ ನಾನು ಉಪವಾಸಮಾಡುತ್ತೇನೆ. ಅನ್ಯ ವಿಷಯದ ಕಡೆಗೆ ಗಮನವಿರಿಸದೆ ಚಿತ್ತೈಕಾಗ್ರತೆಯಿಂದ ಪರಾತ್ಪರವಸ್ತುವನ್ನು ಧ್ಯಾನಿಸುತ್ತ ಉಪವಾಸಮಾಡುತ್ತೇನೆ. ನಾನು ಕರುಣೆಯ ಗಣಿಯಾಗಿದ್ದೇನೆ ; ಆಶೆ ಆಮಿಷಗಳನ್ನು ತ್ಯಜಿಸಿದ್ದೇನೆ. ಇದು ನನ್ನ ಉಪವಾಸದ ರೀತಿ" ಎಂದು ನಾನಕ್ ನುಡಿದನು.

"ಕುರಾನ್ ಪವಿತ್ರ ಗ್ರಂಥವನ್ನು ನೀನು ಓದಿದ್ದೀಯಾ ?" ಎಂದವರು ಕೇಳಿದರು.

"ನಾನದನ್ನು ಓದಿಲ್ಲ ; ದೈವಾಜ್ಞೆಯಂತೆ ನಡೆಯುತ್ತೇನೆ. ಭಾವಾವೇಗವನ್ನು ತಡೆಹಿಡಿಯದ, ಮನೋನಿಗ್ರಹವಿಲ್ಲದ, ಓದು ಸಮನಲ್ಲ. ಪ್ರೇಮಮೂರ್ತಿಯ ಕಾಯಕವೆಲ್ಲ ಪೂಜೆ. ಪರಸ್ಪರ ಕಲಹನಿರತರಾದ ದೇವರುಗಳನ್ನು ಪೂಜಿಸುವ ಜನ ಭಗವತ್ಸಾಕ್ಷಾತ್ಕಾರವನ್ನೆಂತು ಪಡೆಯುತ್ತಾರೆ?" ಎಂದು ಗುರು ಉತ್ತರಿಸಿದನು.

ಇಂಡಿಯಾದಿಂದ ಬಂದಿದ್ದ ನಾನಕನ ಪರಿಚಯವಿದ್ದ ಷೇಖ್ ಇಬ್ರಾಹಿಮ್, ಮಖದುಮ್ ಬಹಾಉದ್ದೀನ್ ಮೊದಲಾದ ಹಲವು ಮುಸ್ಲಿಮ್ ಸಂತರಿಗೆ ನಾನಕ್ ಸಹ ಅಲ್ಲಿದ್ದ ಸಂಗತಿ ತಿಳಿಯಿತು. ಅಧ್ಯಾತ್ಮ ಜೀವನದ ಸಮಸ್ಯೆಗಳನ್ನು ಬಗೆಹರಿಸಲು ಅವರು ಬಳಸುತ್ತಿದ್ದ ಅಸಾಂಪ್ರದಾಯಿಕ ಹಾಗೂ ರಹಸ್ಯಾತ್ಮಕ ವಿಧಾನಗಳನ್ನವರು ತಮ್ಮ ಮತೀಯರಿಗೆ ವಿವರಿಸಿದರು. ಅವನಿಗೆ ಗೌರವ ಸಲ್ಲಿಸುವ ಸಲುವಾಗಿ ಅವರು ಅವನ ಬಳಿ ಹೋದದ್ದಲ್ಲದೆ, ಅವನೊಡನೆ ವಾದವಿವಾದಕ್ಕಿಳಿಯಬಾರದೆಂದೂ ಅವನಿಂದ ತಿಳಿವು ಪಡೆಯಬೇಕೆಂದೂ ತಮ್ಮವರಿಗೆ ಎಚ್ಚರಿಕೆ ನೀಡಿದರು. ಲೌಕಿಕರು ಭಗವದಾನಂದ

ಪಡೆಯುವ ಬಗೆ ಹೇಗೆಂದು ಅವನನ್ನವರು ಕೇಳಿದರು. "ಈಶ್ವರೇಚ್ಛೆಗೆ ವಿನಯ ಪೂರ್ವಕವಾಗಿ ಶರಣಾಗುವುದರಿಂದ."

ಕೆಲಕಾಲಾನಂತರ ಗುರು ಮದೀನಾಕ್ಕೂ ಅಲ್ಲಿಂದ ಬಾಗದಾದ್ ನಗರಕ್ಕೂ ಹೋದನು. ಅವನು ನಗರದ ಹೊರಭಾಗದಲ್ಲಿ ಕುಳಿತು ಗಟ್ಟಿಯಾಗಿ ಪ್ರಾರ್ಥಿಸಿದನು: "ಊರ್ಧ್ವ ಹಾಗು ಅಧೋಲೋಕಗಳು ಅಸಂಖ್ಯವಾಗಿವೆ. ಅವುಗಳ ಇತಿಮಿತಿಯನ್ನು ಯಾರೂ ಕಂಡಿಲ್ಲ. ಅವುಗಳ ಅನಂತತೆ ನನ್ನ ದೇವನೊಬ್ಬನಿಗೆ ಮಾತ್ರ ಗೊತ್ತು." ಮುಸ್ಲಿಂ ಪುರೋಹಿತರು ಈ ಪ್ರಾರ್ಥನೆಯನ್ನು ಕೇಳಿ ತುಂಬ ಕುಪಿತರಾದರು. ಏಕೆಂದರೆ ಅವರು ತಿಳಿದಿದ್ದದ್ದು ಏಳು ಊರ್ಧ್ವ ಲೋಕಗಳು ಮತ್ತು ಏಳು ಅಧೋಲೋಕಗಳು ಮಾತ್ರ. ಭಗವಚ್ಛಕ್ತಿಯ ಪಾರವನ್ನು ಕಂಡುಹಿಡಿಯಲು ಪ್ರಯತ್ನಿಸುವ ನಶ್ವರ ಮಾನವ ಕೊನೆಗೆ ವಿಫಲವಾಗುತ್ತಾನೆಂಬ ನಾನಕ್ ವಾದಿಸಿದನು. ಬಾಗದಾದ್ ನಗರದಲ್ಲಿ ಇಂದಿಗೂ ಅವನ ಸ್ಮಾರಕವಾಗಿ ದೇವಾಲಯವೊಂದು ನಿಂತಿದೆ. ನಿಷ್ಠಾವಂತನಾದ ಮುಸ್ಲಿಂ ಒಬ್ಬ ಅದನ್ನು ನೋಡಿಕೊಳ್ಳುತ್ತಿದ್ದಾನೆ.[1]

ಅನಂತರ ಗುರು ಮುಲ್ತಾನ್ ಮಾರ್ಗವಾಗಿ ಸ್ವದೇಶಕ್ಕೆ ಮರಳಿದನು. ಆ ಕಾಲದಲ್ಲಿ ಅನೇಕ ಫಕೀರರು ಆ ಊರಿನಲ್ಲಿ ತುಂಬಿರುತ್ತಿದ್ದರು. ತಮ್ಮಂಥವರು ಅನೇಕ ಸಂಖ್ಯೆಯಲ್ಲಿ ಆ ಊರಿನಲ್ಲಿದ್ದ ಸಂಗತಿಯನ್ನೂ, ಅವನಂಥ ಬೇರೊಬ್ಬನಿಗೆ ಅಲ್ಲಿ ತಾವಿಲ್ಲವೆಂಬುದನ್ನೂ ಸೂಚಿಸುವ ಸಲುವಾಗಿ ಅವನಿಗೊಂದು ಬಟ್ಟಲು ಹಾಲನ್ನು ಕಳುಹಿಸಿದರು. ಗುರು ಹಾಲಿನ ಮೇಲೊಂದು ಮಲ್ಲಿಗೆ ಹೂವನ್ನಿರಿಸಿದನು. ಭಾರವಿಲ್ಲದ ಹೂವು ಹಾಲನ್ನು ತುಳುಕಿಸದೆ ಆದರ ತಲದಮೇಲೆ ತೇಲುತ್ತಿತ್ತು. ಅದೇ ರೀತಿ ಅವನೂ ಸುತ್ತಲೂ ಕಂಪನ್ನು ಚೆಲ್ಲಿ ಅವರ ನಡುವೆ ಬಾಳುವುದಾಗಿ ಸೂಚಿಸುವಂತಿತ್ತು, ಆ ಮಲ್ಲಿಗೆ ಹೂವು.

---

[1] ಆ ಗುಡಿಯ ಗೋಡೆಯ ಮೇಲಣ ಶಾಸನ ಹೀಗಿದೆ: "ದೇವಮಾನವ ಬಾಬಾ ನಾನಕ್ ಫಕೀರ್ ಔಲಿಯಾನ್ ಸ್ಮಾರಕವಾಗಿ ಏಳು ಮಂದಿ ಸಂತರ ಸಹಾಯದಿಂದ ಈ ದೇವಾಲಯ ನಿರ್ಮಿತವಾಗಿದೆ." (ಹಿಜ್ರಿ: 927ನೇ ವರ್ಷ: 1520–21)

## ೭

"ಜ್ಯೋತಿ ಜ್ಯೋತಿಯಲ್ಲಿ ವಿಲೀನವಾಯಿತು ; ಮಾನವ ಕೃತಾರ್ಥನಾದ."

—ಗುರು ಅರ್ಜುನ

ಈಗ ದೂರ ಖ್ಯಾತನೂ, ಚೈತನ್ಯಕ್ಕಲ್ಲದಿದ್ದರೂ ವರ್ಷಗಳು ಕಳೆದಂತೆಲ್ಲಾ ಶರೀರಕ್ಕೆ ಮುಪ್ಪಡಿಸಿದವನೂ ಆದ ಗುರು ರಾವಿನದಿಯ ಬಲ ದಡದಲ್ಲಿದ್ದ ಕರ್ತಾರಪುರದಲ್ಲಿ ನೆಲಸಿದನು. ಯಾತ್ರಾರ್ಥಿಯ ವೇಷವನ್ನು ತ್ಯಜಿಸಿ, ಗೃಹಸ್ಥನ ವೇಷವನ್ನು ಸ್ವೀಕರಿಸಿದನು. ಈ ಹಿಂದೆ ಹೇಳಿರುವಂತೆ, ಆತನ ಪತ್ನಿ ಈ ಮೊದಲೇ ಇಲ್ಲಿಗೆ ಬಂದಿದ್ದಳು. ತನ್ನ ಮಗ ಲಖ್ಮೀದಾಸನೊಡನೆ ಗದ್ದೆ ಕೆಲಸಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದಳು. ಇನ್ನೊಬ್ಬ ಮಗ, ಶ್ರೀಚಂದ ಎಂಬುವನು ಪರಿವ್ರಾಜಕನಾಗಿದ್ದನು. ಗುರು ಹಿಂದಿರುಗಿದನೆಂಬ ಸಮಾಚಾರ ವನ್ನು ಕೇಳಿ, ಆತನಿಗೆ ತಮ್ಮ ಗೌರವವನ್ನು ಸಲ್ಲಿಸಿ ಉಪದೇಶವನ್ನು ಪಡೆಯ ಬೇಕೆಂದು ಭಾರತದ ನಾಲ್ಕು ಮೂಲೆಗಳಿಂದ ಗಂಡಸರೂ ಹೆಂಗಸರೂ ಗುಂಪು ಗುಂಪಾಗಿ ಬಂದು ನೆರೆದರು.

ಜೀವನಪರ್ಯಂತ ನಾನಕನ ಜೊತೆಗಾರನಾಗಿದ್ದ ಸಂಗೀತಜ್ಞ ಮರ್ದನ ಇಲ್ಲಿ ತನ್ನ ಕೊನೆಯುಸಿರನ್ನೆಳೆದನು. ಗುರು ಅವನ ಮಗನಾದ ಷಹಜಾದನನ್ನು ತನ್ನ ಮನೆಯಲ್ಲಿಯೇ ಇರಿಸಿಕೊಂಡನು. ತನ್ನ ತಂದೆಯಂತೆಯೇ ಅವನೂ ಭಕ್ತರ ಸಭೆಯಲ್ಲಿ ರಿಬೆಕ್ ವಾದ್ಯವನ್ನು ನುಡಿಸುತ್ತಿದ್ದನು. ಆಗ ನಾನಕ್ ತನ್ನ ರಚನೆಗಳನ್ನು ತಾನೇ ಹಾಡುತ್ತಿದ್ದನು. ಅಥವಾ ಅವುಗಳಿಗೆ ಸಂಬಂಧಿಸಿ ದಂತೆ ವ್ಯಾಖ್ಯಾನ ಮಾಡುತ್ತಿದ್ದನು. ಮುಸಲ್ಮಾನ ರಬಾಬಿಗಳು (ರೆಬೆಕ್ ವಾದ್ಯಗಳನ್ನು ನುಡಿಸುವವರು) ಸಿಖ್ ದೇವಾಲಯಗಳಲ್ಲಿ ಹರಿ-ಕೀರ್ತನವನ್ನು ನಡೆಸಿಕೊಡುವ ಸಂಪ್ರದಾಯ ಇನ್ನೂ ಉಳಿದು ಬಂದಿದೆ. ಸಿಖ್ ದೇವಾಲಯ ಗಳಲ್ಲಿ ಹಿಂದೂ ಮತ್ತು ಸಿಖ್ ಸಂಗೀತಗಾರರಿಗೆ ಎಷ್ಟು ಗೌರವ ಸಲ್ಲು ತ್ತದೆಯೋ ಅಷ್ಟೇ ಗೌರವ ಇವರಿಗೂ ಸಲ್ಲುತ್ತದೆ ; ಅವರಷ್ಟೇ ಉತ್ಸಾಹದಿಂದ ಇವರೂ ಆ ಕಾರ್ಯಗಳನ್ನು ನಡೆಸಿಕೊಡುತ್ತಾರೆ.

ಮುಂದೆ ಅಂಗದನೆಂದು ಹೆಸರಾದ ಭಾಯಿ ಲೆಹ್ನಾ ಗುರುವಿನ ಶಿಷ್ಯನಾದುದು ಇಲ್ಲಿಯೆ. ಅವನ ಆಧ್ಯಾತ್ಮಿಕ ಗದ್ದುಗೆಗೂ ಮುಂದೆ ಅವನೇ ವಾರಸುದಾರನಾದನು. ಎಂದಿನಂತೆ, ಲೆಹ್ನಾ ತಾನು ಪೂಜಿಸುತ್ತಿದ್ದ ವೈಷ್ಣವ ದೇವಿಯ ಮಂದಿರಕ್ಕೆ ಯಾತ್ರಾರ್ಥಿಯಾಗಿ ಹೋಗುತ್ತಿದ್ದನು. ಒಂದು ರಾತ್ರಿ ಅಲ್ಲಿ ತಂಗಿದ್ದು, ಗುರುನಾನಕನನ್ನು ಭೇಟಿಯಾಗಬೇಕೆಂದು ಸಿಖ್ಖರಲ್ಲೊಬ್ಬ ಒತ್ತಾಯಪಡಿಸಿದನು. ಲೆಹ್ನಾ ಅಂತೆಯೇ ಮಾಡಿದನು. ನಾನಕನ ದೈವ ಭಕ್ತಿಯನ್ನೂ, ವಿಚಿಕಿತ್ಸಕ ಜ್ಞಾನವನ್ನೂ ಕಂಡು ಪ್ರಭಾವಿತನಾಗಿ ಅವನ ಶಿಷ್ಯನಾದನು. ಅತ್ಯಂತ ಶ್ರದ್ಧಾ ಭಕ್ತಿಗಳಿಂದ ಕಡೆಯ ದಿನಗಳವರೆಗೂ ಆತನಿಗೆ ಸೇವೆ ಮಾಡಿದನು.

ಒಂದು ದಿನ ತನ್ನ ಅನುಯಾಯಿಗಳನ್ನು ಪರೀಕ್ಷಿಸಬೇಕೆಂದು ನಾನಕ್ ಕಾಡು ಮನುಷ್ಯನ ವೇಷವನ್ನು ಹಾಕಿಕೊಂಡನು. ಹರಿದು ಚಿಂದಿಯಾಗಿದ್ದ ನಿಲುವಂಗಿಯೊಂದನ್ನು ಹಾಕಿಕೊಂಡು, ಕೈಯಲ್ಲಿ ಚಾಕುವೊಂದನ್ನು ಹಿಡಿದುಕೊಂಡು, ಕೆಲವು ಬೇಟೆನಾಯಿಗಳೊಂದಿಗೆ ಅವನು ಕಾಡಿನತ್ತ ನಡೆದನು. ಅವನು ಆ ರೀತಿ ವೇಷಧರಿಸಿದ್ದುದನ್ನು ಕಂಡು ಅವನ ಅನೇಕ ಅನುಯಾಯಿಗಳು ಭಯಾಕ್ರಾಂತರಾಗಿ ಓಡಿಹೋದರು. ಇನ್ನೂ ಕೊಂಚದೂರ ಅವನನ್ನು ಹಿಂಬಾಲಿಸಿದ ಇತರರು ದಾರಿಯಲ್ಲಿ ತಾಮ್ರದ ನಾಣ್ಯಗಳು ಬಿದ್ದಿದ್ದುದನ್ನು ಕಂಡರು. ಆ ನಾಣ್ಯಗಳನ್ನೆತ್ತಿಕೊಂಡು ಅವರೂ ಬೇಗ ಬೇಗ ಹಿಂದಿರುಗಿದರು. ಉಳಿದ ಕೆಲವರು ಇನ್ನೂ ಕೊಂಚ ಮುಂದೆ ಬೆಳ್ಳಿಯ ನಾಣ್ಯ ಬಿದ್ದಿದ್ದುದನ್ನು ಕಂಡರು. ಅವುಗಳನ್ನು ಆಯ್ದುಕೊಂಡು ಅವರೂ ಮನೆಗಳಿಗೆ ಹಿಂದಿರುಗಿದರು. ಇಬ್ಬರು ಸಿಖ್ಖರು ಮತ್ತು ಲೆಹ್ನಾ ಮಾತ್ರ ಕೊನೆಗುಳಿದರು. ಈ ಗುಂಪು ಉರಿಯುತ್ತಿದ್ದ ಚಿತೆಯೊಂದರ ಬಳಿಗೆ ಬಂತು. ಆ ಚಿತೆಯ ಪಕ್ಕದಲ್ಲಿ ಹೆಣವೊಂದು ಬಿದ್ದಿತ್ತು. ಅದರ ಮೇಲೆ ಬಿಳಿಯ ಬಟ್ಟೆಯನ್ನು ಹೊದ್ದಿಸಲಾಗಿತ್ತು. ಹೆಣ ನಾರುತ್ತಿತ್ತು. ಕೆಂಗಣ್ಣನಾಗಿದ್ದ ಗುರು ಗರ್ಜಿಸಿದನು : "ನನ್ನ ಜೊತೆಯಲ್ಲಿ ಇರಬಯಸುವವನು ಈ ಹೆಣವನ್ನು ತಿನ್ನಲಿ." ಆ ಇಬ್ಬರು ಸಿಖ್ಖರು ಬೆದರಿ ಓಡಿದರು. ಆದರೆ ಲೆಹ್ನಾ ಅಲ್ಲಿಯೇ ಉಳಿದನು. "ನನ್ನ ಗುರುವಿನ ಆಜ್ಞೆಯನ್ನು ನಾನು ಪಾಲಿಸುತ್ತೇನೆ" ಎಂದು ಹೇಳಿದನು. ಆ ಹೆಣದತ್ತ ಹೆಜ್ಜೆ ಹಾಕಿದಾಗ ಗುರು ಆತನನ್ನು ತಡೆದು ಹೇಳಿದನು : "ಇಷ್ಟೇ ಸಾಕು. ನಾನು

ತೋರಿದ ಮಾರ್ಗವನ್ನು ಅನುಸರಿಸುವ ನೈತಿಕ ಶಕ್ತಿ ಎಷ್ಟು ಜನರಲ್ಲಿದೆ ಯೆಂಬುದು ಈಗ ನನಗೆ ಗೊತ್ತಾಯಿತು."

ಲೆಹ್ನಾ ಗದ್ದೆಯಲ್ಲಿ ಕೆಲಸಮಾಡುತ್ತಿದ್ದುದರ ಜೊತೆಗೆ ತನ್ನ ಬಿಡುವಿನ ಅವಧಿಯನ್ನೆಲ್ಲ ದೇವರ ಧ್ಯಾನಕ್ಕೆ ಮೀಸಲಾಗಿಟ್ಟಿದ್ದನು. ನಾನಕ್ ಅವನನ್ನು ಇನ್ನೂ ಕೆಲವು ಕಠಿನ ಪರೀಕ್ಷೆಗಳಿಗೆ ಗುರಿಮಾಡಿದನು. ಅವನ ಮಕ್ಕಳು ಎಲ್ಲ ಸಂದರ್ಭಗಳಲ್ಲಿಯೂ ಅವಿಧೇಯರಾಗಿ ನಡೆದುಕೊಂಡರು. ಅವನ ಇತರ ಅನುಯಾಯಿಗಳು ನೆಪಗಳನ್ನೊಡ್ಡಿ ಕೆಲಸದಿಂದ ತಪ್ಪಿಸಿಕೊಳ್ಳಲು ಯತ್ನಿಸುತ್ತಿದ್ದರು. ಇಲ್ಲವೆ ಅರೆಮನಸ್ಸಿನಿಂದ ಕೆಲಸ ಮಾಡುತ್ತಿದ್ದರು. ಲೆಹ್ನಾನ ಶ್ರದ್ಧೆ ಮಾತ್ರ ಅವಿಚಲಿತವಾಗಿತ್ತು. ತನ್ನ ಅವಸಾನ ಕಾಲ ಸಮೀಪಿಸುತ್ತಿದೆಯೆಂಬುದನ್ನರಿತ ಗುರು ಅವನ ಮುಂದೆ ಐದು ಪೈಸೆಗಳನ್ನೂ ಒಂದು ತೆಂಗಿನಕಾಯಿಯನ್ನೂ ಇಟ್ಟು, ಅವನನ್ನು ನಾಲ್ಕು ಬಾರಿ ಪ್ರದಕ್ಷಿಣೆ ಮಾಡುವುದರ ಮೂಲಕ ತನ್ನ ಉತ್ತರಾಧಿಕಾರಿಯಾಗಿ ನೇಮಿಸಿದನು. ನಾನಕನ ಮತ್ತೊಬ್ಬ ಅನನ್ಯ ಶಿಷ್ಯ ಭಾಯಿಬುದ್ಧ ಅವನ ಹಣೆಗೆ ತಿಲಕ (ಕಾವಿ ಚಿಹ್ನ)ವನ್ನಿಡುವುದರ ಮೂಲಕ ಈ ಆಯ್ಕೆಯನ್ನು ಅನುಮೋದಿಸಿದನು. ತನ್ನ ಅನನ್ಯ ಅನುಯಾಯಿಗಳು ಅನುಮೋದಿಸದೆ ಹೋದರೆ ಈ ಉತ್ತರಾಧಿಕಾರ ಸಂಸ್ಕಾರವೇ ಅಪೂರ್ಣವಾಗುತ್ತದೆಂದು ಭಾವಿಸುವಷ್ಟರ ಮಟ್ಟಿಗೆ ನಾನಕನಲ್ಲಿ ವಿನಯಗುಣ ಮನೆಮಾಡಿಕೊಂಡಿತ್ತು.

ಗುರುಪತ್ನಿ ಇದನ್ನು ವಿರೋಧಿಸಿದಳು; ತನ್ನಿಬ್ಬರು ಮಕ್ಕಳನ್ನು ಅವನ ಮುಂದೆ ತಂದು ನಿಲ್ಲಿಸಿ ನುಡಿದಳು: "ನನ್ನ ಮತ್ತು ಇವರ ಗತಿ ಏನು?" "ದೇವರೇ ನಿನಗೆ ಶರಣು. ದೈವ ಸಂಕಲ್ಪದಂತೆ ನಾನು ನಡೆದುಕೊಂಡಿದ್ದೇನೆ" ಎಂದು ಗುರು ಉತ್ತರಿಸಿದನು.

ಅನಂತರ ಗುರು ಈ ಕೀರ್ತನೆಯನ್ನು ಹಾಡಿದನು:

ಜಯಜಯ ನಿನಗೆಲೆ ನಿಜದೊರೆ ಜಯವಾಗಲಿ ನಿನಗೆ
ಸೃಷ್ಟಿಪೆ ಎಲ್ಲರ, ಅಣಿಗೊಳಿಸುವೆ ಕಾಯಕವನು ಎಲ್ಲರಿಗೂ
ಆಯುಷ್ಯವು ತೀರಿದ ದಿನವೇ, ಬಟ್ಟಲು ತುಂಬಿದ ದಿನವೇ
ಆತ್ಮವ, ಕಾಯುವ ಬೇರ್ಪಡಿಸುವೆ ನೀನು

ಒಯ್ಯುವೆ ಆತ್ಮವನಾಕ್ಷಣ, ಒಲಿದವರೂಳಿಡಲು
ಓ! ನೆಚ್ಚಿನ ಜನರೇ, ನೆನೆಯಿರಿ ದೇವನ
ಪಯಣವು ನಿಶ್ಚಿತವೆಲ್ಲರಿಗೆಂಬುದ ನೆನೆನೆನೆದು.
ಲೋಕದ ವಾಸವು ತಾನದು ಸೀಮಿತ, ಪಯಣವು ನಿಶ್ಚಿತ.
ಅತಿಥಿಯ ತೆರದೊಳು ವರ್ತಿಸೆ ವಿಹಿತವು, ಸಲ್ಲದು ಅಹವೊಂದೂ
ನಮ್ಮಯ ಕಾರ್ಯವೆ ಪರಿಗಣಿಸೀಯವು ಆ ಲೋಕದೊಳು.
ತಾನೊರೆದಾ ಒಲುಮೆಯ ಬಾಳನು ನಡೆಸುವರಾರೋ
ಅವರಿಗೆ ಮಾತ್ರವೆ ದೊರೆವುದು ಎಡೆಯಾತನ ಸನಿಹದೊಳು.
ತಂದೆಯೆ, ಪ್ರೇಮದಿ ದುಃಖಿಗಳಹರೆ ನಿಜಕೂ ದುಃಖಿಗಳು
ಸಂಪಾದನೆಗಲ್ಲದೆ ನಮ್ಮೊಲಿತಿಗೆ ಅಳುವವರೇ ನಿಜಕೂ ಅಳುವವರು.
ಓ, ಒಲವೆ! ಪ್ರೇಮದಿ ಅಳುವನೆ ನಿಜಕೂ ಅಳುವನು ನಮಗಾಗಿ.

ಅನಂತರ "ಸೋಹಿಲಾ" (ದೈವ ಸಂಕೀರ್ತನ) ಎಂಬ ತನ್ನ ರಚನೆಯನ್ನು ಹಾಡಬೇಕೆಂದು ತನ್ನ ಅನುಯಾಯಿಗಳನ್ನು ಕೇಳಿಕೊಂಡನು. ಈ ಹಿಂದೆ ಮಲಗುವ ಮುನ್ನ ಅವರೊಡನೆ ಸೇರಿ ತಾನೂ ಆ ಗೀತೆಯನ್ನು ಹಾಡುತಿದ್ದುದುಂಟು. ಅದು ಇಂತಿದೆ :

"ಶಾಂತಿಯ ಮನೆಯೊಳು ನೆಲೆಸಿಹ ದೇವನ ಕೀರ್ತಿಯ ಹಾಡಿರಿ
ನಿರ್ಭಯ ದೇವನ ಕೀರ್ತನವೀವುದು ಶಾಂತಿಯ ಮನಕೆ.
ಬೆಲೆಯನು ಕಟ್ಟಲು ಆಗದು ಕೃಪೆಗೆನೆ, ದಾತಾರಗೆ ಬೆಲೆ
ಕಟ್ಟುವೆವೆಂತು?
ನನ್ನಯ ಮದುವೆಯ ಚಣದಿನ, ತಿಂಗಳು ವರ್ಷವು ನಿಶ್ಚಿತ.
ಮಿತ್ರರೆ, ಹೊಸಲಿಗೆ ಎಣ್ಣೆಯ ಹಾಕಿರಿ, ಹರಸಿರಿ ನನ್ನೊಲವನು ನಾ
ಸೇರುವೊಲು
ಪ್ರತಿಗೇಹದೊಳೂ ಇಂದೋ ನಾಳೆಯೊ ಅಲ್ಲಿಯ ಕರೆ ಮೊಳಗುವುದು.
ಆ ದಿನ ಬಹುದೆಲ್ಲರಿಗೆನೆ ಆಗಿಸಿ ಎದೆಯೊಳು ದೇವನ ಸಂಮಿಲನ."

ಅನಂತರ ನಾನಕ್ ಸಮಾಧಿಸ್ಥನಾದನು. ನಾನಕ್ ಇನ್ನಿಲ್ಲದಂತಾದನು. ಮುಸ್ಲಿಮರ ಪದ್ಧತಿಯಂತೆ ಅವನನ್ನು ಮಣ್ಣುಮಾಡಬೇಕೆ ಅಥವಾ

ಹಿಂದೂಗಳ ಸಂಪ್ರದಾಯದಂತೆ ಅವನ ಅಂತ್ಯ ವಿಧಿಗಳನ್ನು ನೆರವೇರಿಸಬೇಕೆ ಎಂಬ ವಿಚಾರ ಹಿಂದೂ-ಮುಸ್ಲಿಮರ ನಡುವೆ ಜಗಳವನ್ನೇ ತಂದಿಕ್ಕಿತು. ಎರಡು ಪಕ್ಷಗಳವರೂ ಬಲವಾಗಿಯೇ ಪಟ್ಟು ಹಿಡಿದಿದ್ದರು. ಎರಡೂ ಪಕ್ಷ ಗಳಲ್ಲಿದ್ದ ವಿವೇಕಶೀಲರು ಒಂದು ಒಮ್ಮತಕ್ಕೆ ಬಂದರು : ರಾತ್ರಿ ಎರಡೂ ಪಕ್ಷ ಗಳವರು ನಾನಕನ ಪಾರ್ಥಿವ ಶರೀರದ ಮೇಲೆ ಹೂವುಗಳನ್ನು ಇರಿಸಬೇಕು ; ಯಾವ ಪಕ್ಷದ ಹೂವುಗಳು ಮೊದಲು ಬಾಡಿಹೋಗುತ್ತವೆಯೋ ಅವರು ಇನ್ನೊಂದು ಪಕ್ಷದ ಆಶಯಕ್ಕನುಗುಣವಾಗಿ ನಡೆದುಕೊಳ್ಳಬೇಕೆಂಬುದೇ ಆ ಒಪ್ಪಂದವಾಗಿತ್ತು. ಬೆಳಿಗ್ಗೆ ಎದ್ದು ನೋಡಿದಾಗ ಒಂದು ಪಕ್ಷದ ಹೂವುಗಳು ಇನ್ನೊಂದು ಪಕ್ಷದ ಹೂವುಗಳಷ್ಟೇ ಕಾಂತಿಯಿಂದ ಕೂಡಿದ್ದುವು. ಆ ಪಾರ್ಥಿವ ಶರೀರದ ಮೇಲೆ ಹೊದಿಸಿದ್ದ ಬಿಳಿಯ ವಸ್ತ್ರವನ್ನು ತೆಗೆದಾಗ ಅಲ್ಲಿ ಆ ಕಳೇಬರಕ್ಕೆ ಬದಲಾಗಿ ಅವರು ಶೂನ್ಯವನ್ನೂ, ಒಂದಿಷ್ಟು ಹೂವುಗಳನ್ನೂ ಕಂಡರಂತೆ. ಆಗ ಆ ವಸ್ತ್ರವನ್ನೇ ಎರಡು ಸಮಪಾಲುಗಳಾಗಿ ಹಂಚಿಕೊಳ್ಳು ವುದಾಗಿ ಅವರು ತೀರ್ಮಾನಿಸಿದರು. ಒಂದು ಪಕ್ಷ ಅದನ್ನು ಹೂಳಿತು, ಮತ್ತೊಂದು ಪಕ್ಷ ಅದನ್ನು ಅಗ್ನಿಗೆ ಆಹುತಿಮಾಡಿತು.

ಈ ಅಸಾಮಾನ್ಯ, ರಹಸ್ಯಾತ್ಮಕ ಚೇತನದ ಜೀವನಕಥೆ ಹೀಗೆ ಕೊನೆ ಗೊಂಡಿತು. ಆತನ ಬದುಕು ತನ್ನ ಜೀವಮಾನಕಾಲದಲ್ಲೇ ಪುರಾಣ ವಸ್ತುವಾ ಯಿತು. ಆತನಿಗೆ ತನ್ನ ಜೀವನ ಅಷ್ಟೇ ಅಲ್ಲ, ಎಲ್ಲ ಜೀವನವೂ ಸತ್ಯದ ಜ್ವಲಂತ ಅನುಭವವಾಗಿತ್ತು. ತಾನು ಅನುಭವಿಸಿ, ಕಾಣಬೇಕೆಂದೇ ಆತನು ಬಾಳಿದ. ಇಲ್ಲಿ ನಮ್ಮೊಳಗೆ, ನಮ್ಮೆಲ್ಲರ ಕೈಗೂ ಎಟುಕುವಂತಿರುವ, ಇಷ್ಟಾದರೂ ಅನೇಕರಿಗೆ ಅತಿದೂರವೂ ಅವಾಸ್ತವವೂ ಎನ್ನಿಸಿರುವಂತಹ ಆ ಲೋಕವನ್ನು ಕಂಡುಕೊಂಡನು. ಪರಮಾತ್ಮನೊಡನೆ ಸಾಮರಸ್ಯವನ್ನು ಸಾಧಿಸುವುದರ ಮೂಲಕ, ಆ ಜೀವವನ್ನು ಜಡದಿಂದ ಪ್ರತ್ಯೇಕಿಸುವುದರ ಮೂಲಕ, ಜೀವಂತ ವಾಗಿರುವಾಗಲೇ ಸಾಯುವ ಆದರೂ ಸಮಗ್ರಪರಿಪೂರ್ಣ ಜೀವನವನ್ನು ನಡೆಸುವ ಮೂಲಕ ಆತನು ಜೀವನಕ್ಕೆ ಅರ್ಥವನ್ನು ಕಲ್ಪಿಸಿದನು. ಇದು ಮಾನವನನ್ನು, ಸುಖಿಯಾಗಿಯೂ ಮುಕ್ತನನ್ನಾಗಿಯೂ ಮಾಡುತ್ತದೆ.

# ನಾನಕನ ನುಡಿಮುತ್ತು

ಎಲ್ಲಕಿಂ ಸತ್ಯವೇ ಮಿಗಿಲು
ಸತ್ಯಾಚರಣೆ ಅದಕಿಂ ಮಿಗಿಲು

# ದೇವನನ್ನು ಕುರಿತು

ದೇವನೊಬ್ಬನೆ. ಅವನೆ ಸತ್ತಾ ಅಥವಾ ಸದ್ವಸ್ತು. ಅವನೆ ಸಂಭೂತಿ. ಸತ್ಯ. ಸರ್ವವ್ಯಾಪಿ. ಸೃಷ್ಟಿಕರ್ತ. ಪುರುಷ, ಭಯರಹಿತ, ದ್ವೇಷರಹಿತ. ಕಾಲಾತೀತ. ಅನವತಾರಿ. ಸ್ವಯಂಭೂ. ಸ್ವಯಂಪ್ರಕಾಶ. ಕರುಣಾಳು. (ಮೂಲ ಮಂತ್ರ ಮೊ.* ಸಿಖ್ಖರ ಧರ್ಮಗ್ರಂಥದ ಮೊದಲಲ್ಲಿ ಬರುವ ಮೂಲ ಮಂತ್ರ)

ಆದಿಯಲ್ಲಿ ಸತ್ಯ. ಪ್ರಾಕ್ತನ ಯುಗದಲ್ಲಿ ಸತ್ಯ. ಅವನೇ ಸತ್ಯ. ಸತ್ಯಸ್ಯ ಸತ್ಯ. (ಜಾಪು. ಮೊ.)

ದೇವನನ್ನು ಯಾರೂ ನೇಮಿಸಿಲ್ಲ, ಯಾರೂ ಸೃಷ್ಟಿಸಿಲ್ಲ. ಅವನು ಸ್ವಯಂಭೂ. ನಿಷ್ಕಳಂಕ. (ಜಾಪು. ಮೊ. 5)

ಸತ್ಕಾರ್ಯಗಳಿಂದ ಉತ್ತಮ ಜೀವರಾಶಿಯಲ್ಲಿ ಹುಟ್ಟು ಪಡೆಯಬಹುದಾದರೂ ದೇವನ ಕೃಪೆಯಿಂದ ಮತ್ತು ಆಶೀರ್ವಾದದಿಂದ ಮಾತ್ರವೆ ಮುಕ್ತಿ ದೊರೆಯುತ್ತದೆ. (ಜಾಪು. ಮೊ. 5)

ದೇವನ ಅರಿವು ಅವರ್ಣನೀಯ. ನಾನು ಅರಿತಿರುವೆನಾದರೂ ವಿವರಿಸಲಾರೆ (ಜಾಪು. ಮೊ. 5)

ನನ್ನ ದೇವನಿಗೆ ಯಾವುದು ಪ್ರಿಯವಾಗುತ್ತದೆಯೋ ಅದೇ ಒಳ್ಳೆಯದು. (ಜಾಪು. ಮೊ. 16)

ಓ ಆದಿ ಶಬ್ದವೆ, ಮಾಯೆಯನ್ನು ಸೃಷ್ಟಿಸಿದವನೆ, ಮೂಲ ಕಾರಣನೆ, ನಿನಗೆ ನಮಸ್ಕಾರ. ನೀನೆ ಆ ಶಾಶ್ವತ ಸತ್ಯ, ಶಿವ, ಸೌಂದರ್ಯ. (ಜಾಪು. ಮೊ. 21)

* ಕಂಸಗಳಲ್ಲಿ ಮೊದಲು ರಚನೆ ಅಥವಾ ಛಂದಸ್ಸಿನ ಹೆಸರನ್ನೂ ಅನಂತರ ಪದ್ಯ ಸಂಖ್ಯೆ ಮತ್ತು ಪಾದಸಂಖ್ಯೆಯನ್ನೂ ಕೊಡಲಾಗಿದೆ. ಸಿಖ್ ಧರ್ಮಗ್ರಂಥಕ್ಕನುಗುಣವಾಗಿ ಈ ವಿವರಗಳನ್ನು ಕೊಡಲಾಗಿದೆ. ಮೊ. ಎಂಬುದು ಮೊದಲ ಗುರು ಅಂದರೆ ನಾನಕನ ರಚನೆ ಎಂಬುದನ್ನು ಸೂಚಿಸುತ್ತದೆ.

ತಾನೆಷ್ಟು ದೊಡ್ಡವನಾಗಿರಬೇಕೆಂಬುದು ದೇವನಿಗೆ ಮಾತ್ರ ಗೊತ್ತು.
(ಜಾಪು. ಮೊ. 244)

ಎಲ್ಲೆಡೆಗಳಲ್ಲಿಯೂ ದೇವನಿಗೆ ಎಡೆಯುಂಟು. ಎಲ್ಲೆಡೆಗಳಲ್ಲಿಯೂ ಆತನ ಗುಡಿಯುಂಟು. ತನಗೆ ಮನಬಂದುದೆಲ್ಲವನ್ನೂ, ಒಮ್ಮೆಗೇ ಆತನು ಅಲ್ಲಿ ನಿವಿಷ್ಟಗೊಳಿಸುತ್ತಾನೆ. (ಜಾಪು. ಮೊ. 21)

ಅವನನ್ನು ಕಂಡವನು ಮಾತ್ರವೆ ಅವನನ್ನರಿಯಬಲ್ಲ. (ಅಸ. ಮೊ. 4:2)
ದೇವನಿಗೆ ಸಾವೂ ಇಲ್ಲ, ಆತನಿಗಾಗಿ ಅಳುವವರೂ ಇಲ್ಲ.
(ಅಸ. ಮೊ. 4:2)

ದೇವನೊಬ್ಬನೆ ದಾನಿ, ಅವನ ದಾನಕ್ಕೆ ಇತಿ-ಮಿತಿಗಳಿಲ್ಲ.
(ಅಸ. ಮೊ. 4:3)

ಯಾರ ಕೊಡುಗೆಗಳಿಗೆ ಬೆಲೆ ಕಟ್ಟಲು ಸಾಧ್ಯವಿಲ್ಲವೋ ಅಂತಹ ಕೊಡುಗೈಯವನಿಗೆ ಬೆಲೆಕಟ್ಟುವ ಸಾಮರ್ಥ್ಯ ಯಾರಿಗಿದೆ ?
(ಗೌರಿ ದೀಪಕಿ ಮೊ. 4:1)

ಗಳಿಗೆ, ನಿಮಿಷ, ಘಂಟೆ, ಸೂರ್ಯಗ್ರಹಣ, ಚಂದ್ರಗ್ರಹಣ, ಬದಲಾಗುವ ಋತುಗಳು—ಇವೆಲ್ಲವನ್ನೂ, ಆ ಏಕೈಕ ಪರಮಾತ್ಮ ಸೂರ್ಯನೆ ಸೃಷ್ಟಿಸಿದ್ದಾನೆ. ಹೀಗಾಗಿ ಆ ಏಕೈಕ ಪರಮಾತ್ಮನೊಬ್ಬನೆ ಸರ್ವ ವಸ್ತುಗಳಲ್ಲಿ ವ್ಯಾಪಿಸಿಕೊಳ್ಳುತ್ತಾನೆ. (ಅಸ. ಮೊ.)

ಸಹಸ್ರಾಕ್ಷನಾಗಿಯೂ ನಿನಗೆ ಕಣ್ಣುಗಳುಂಟೆ ?
ಸಹಸ್ರ ರೂಪಿಯಾಗಿಯೂ ನಿನಗೆ ರೂಪವುಂಟೆ ?
ಸಹಸ್ರ ಕಮಲಪಾದಿಯಾಗಿಯೂ ನಿನಗೆ ಪಾದಗಳುಂಟೆ ?
ಸಹಸ್ರ ನಾಸಿಕನಾಗಿಯೂ ನಿನಗುಂಟೆ ಮೂಗು ?
ಓ ಅದ್ಭುತಾದ್ಭುತವೆ! ಸರ್ವವ್ಯಾಪಿಯಾದ ಆ ಚೇತನವೆ ನೀನು.
(ಧನಶ್ರೀ. ಮೊ. 4:3)

ಸತ್ಯರೂಪಿಯನ್ನು ಸಂಧಿಸಿದಾಗ ಸತ್ಯ ಗೋಚರಿಸುತ್ತದೆ ;
ಸತ್ಯದರ್ಶಿ ಸತ್ಯದಲ್ಲಿಯೇ ಐಕ್ಯವಾಗುತ್ತಾನೆ. (ಶ್ರೀರಾಗ. ಮೊ. 4:10)

ನಿಶ್ಚಿಂತನಾದ ನನ್ನೊಡೆಯನನ್ನು ಕಂಡಾಗ ನಾನು ನನ್ನ ಅಭಿರೂಪಕ ಸಂಕಲ್ಪವನ್ನೂ, ವಿಚಾರತುಮುಲವನ್ನೂ ತ್ಯಜಿಸಿ ನಿಂತೆ.

(ಶ್ರೀರಾಗ. ಮೊ. 1:11)

ದೇವನನ್ನು ಕಂಡೂ ಭಯಪಡದಿದ್ದರೆ, ಅವನ ಆದೇಶದಲ್ಲಿ ನಾವು ಲಯವಾಗದೆ ಹೋದರೆ ನಾವು ನಿರ್ಭಯರಾಗುವುದೆಂತು ?

(ಶ್ರೀರಾಗ. ಮೊ. 2:11)

ನಮಗೆ ಯಾರು ಬಾಳನ್ನೂ ಆತ್ಮವನ್ನೂ ಕೊಟ್ಟನೋ ಅವನೇ ನಮ್ಮ ಎದೆಯಲ್ಲಿ ಬಂದು ಕುಳಿತಾಗ ಶಾಂತಿಯನ್ನೂ ದಯಪಾಲಿಸುತ್ತಾನೆ.

(ಶ್ರೀರಾಗ. ಮೊ. 2:11)

ನಮ್ಮ ಅಂತರಾತ್ಮದಲ್ಲಿ ದೈವಸಾಕ್ಷಾತ್ಕಾರದ ಭಾವನೆಯನ್ನು ಮೂಡಿಸುವುದರ ಮೂಲಕ ಆತನು ನಮಗೆ ಕೃಪೆದೋರುತ್ತಾನೆ; ನಮ್ಮ ಕಲ್ಮಷವೆಲ್ಲವನ್ನೂ ತೊಳೆದುಹಾಕುತ್ತಾನೆ. (ಶ್ರೀರಾಗ. ಮೊ. 3:12)

ತನ್ನ ದೇವನೊಬ್ಬನನ್ನುಳಿದು ಇತರರಿಗೆ ಒಲಿವ ಹೆಣ್ಣು ನಿಂದ್ಯಳು.

(ಶ್ರೀರಾಗ. ಮೊ. 1:13)

ಎಲ್ಲರಲ್ಲಿಯೂ, ಎಲ್ಲೆಡೆಗಳಲ್ಲಿಯೂ ಒಂದೇ ಜ್ಯೋತಿ ವ್ಯಾಪಿಸಿರುವುದನ್ನು ಕಾಣಬಲ್ಲವನು, ಗುರುಪಥದ ರಹಸ್ಯವನ್ನರಿಯಬಲ್ಲವನು ತನ್ನೊಳಗೇ ದೈವ ಸಾಕ್ಷಾತ್ಕಾರವನ್ನೂ ಕಾಣಬಲ್ಲವನಾಗುತ್ತಾನೆ. (ಶ್ರೀರಾಗ. ಮೊ: 4 14)

ಅಹಂಕಾರಿಗಳು ದೇವರಿಂದ ಬೇರೆಯಾಗುತ್ತಾರೆ.

(ಶ್ರೀರಾಗ. ಮೊ. 4 : 18)

ರುಚಿಯೊಡೆಯನೆ ಭೋಗಿಯೂ ಅಹುದು; ಭೋಗಿಯೇ ಭೋಗವೂ ಅಹುದು. ಒಸಗೆವೆಣ್ಣೂ ಅವನೆ, ಸಜ್ಜೆಯಲ್ಲಿ ಅವಳೊಡನೆ ಪವಡಿಸುವ ಪ್ರಿಯಕರನೂ ಅವನೆ. ಸರ್ವವ್ಯಾಪಿಯಾಗಿರುವವನೂ ಅವನೆ; ಲೀಲೆಯನ್ನು ಕೈಗೊಳ್ಳುವ ಒಡೆಯನೂ ಅವನೆ; ಮೀನೂ ಅವನೆ, ಬೆಸ್ತನೂ ಅವನೆ; ಬಲೆಯೂ ಅವನೆ, ನದಿಯೂ ಅವನೆ. (ಶ್ರೀರಾಗ. ಮೊ.)

ನೀನೋ ಜ್ಞಾನಗಂಗೆ, ನಾನೊಂದು ಕಿರುಮೀನು; ನಿನ್ನ ಹರಹ ನಾನೆಂತರಿವೆ ? (ಅದೇ)

ಬೆಸ್ತನನ್ನಾಗಲೀ, ಬಲೆಯನ್ನಾಗಲೀ ನಾನು ಕಾಣೆ; ಆದರೆ, ನೋವಾದಾಗ ನಿನಗೆ ಮೊರೆಯಿಡುವೆ. (ಶ್ರೀರಾಗ. ಮೊ. 2 : 31)

ಸನಿಹದಲಿ, ದೂರದಲಿ, ಹಾಗೂ ಮಧ್ಯದಲಿ ಇದ್ದು ನೋಡುತ್ತಿರುವವನೂ ಕೇಳುತ್ತಿರುವವನೂ, ನೀನೆ; ಎಲ್ಲವನ್ನು ಸೃಷ್ಟಿಸುತ್ತಿರುವವನೂ ನೀನೆ.
(ಶ್ರೀರಾಗ. ಮೊ. 4 : 31)

ಸತ್ಯವೇ ಅವನು; ಸತ್ಯಕ್ಕೆ ಒಲಿವವನೂ ಅವನೇ.
(ಶ್ರೀರಾಗ. ಮೊ. 2 : 32)

ನಿನ್ನನ್ನು ಸೃಷ್ಟಿಸಿದವನು ಅವನೆ, ಬಣ್ಣನೆಗೆ ನಿಲುಕದ ಆ ನಿನ್ನ ದೇವನೂ ಅವನೇ. (ಶ್ರೀರಾಗ. ಮೊ. 1 : 29)

ಸೃಷ್ಟಿಸುವಾಗ ಅವನು ಯಾರ ಸಲಹೆಯನ್ನೂ ಕೇಳುವುದಿಲ್ಲ, ವಿನಾಶ ಮಾಡುವಾಗಲು ಅವನು ಯಾರ ಸಲಹೆಯನ್ನೂ ಕೇಳುವುದಿಲ್ಲ; ತನ್ನಿಚ್ಛೆ ಬಂದಂತೆ ಕೊಡುವವನೂ ಅವನೆ, ಕೊಳ್ಳುವವನೂ ಅವನೆ.
(ಶ್ರೀರಾಗ. ಮೊ. ಅಷ್ಟಪದಿಗಳು, 4 : 1)

ದೇವರ ಕೃಪೆ ಎಲ್ಲರ ಮೇಲೆಯೂ ಇದೆ; ಆದರೆ ಅವನನ್ನು ಆಯ್ದುಕೊಂಡ ವರಿಗೆ ತನ್ನನ್ನೇ ಕೊಡುತ್ತಾನೆ. (ಶ್ರೀರಾಗ. ಮೊ. ಅಷ್ಟಪದಿಗಳು, 4 : 1)

ನಾವೆಲ್ಲರೂ ದೇವನ ವಧುಗಳು. ಅವನ ಆನಂದಕ್ಕಾಗಿ ನಾವು ನಮ್ಮನ್ನು ಅಲಂಕರಿಸಿಕೊಳ್ಳುತ್ತೇವೆ. ಆದರೆ ನಮ್ಮ ಸೌಂದರ್ಯದ ಬಗ್ಗೆ ನಾವು ಅಭಿಮಾನಪಟ್ಟುಕೊಳ್ಳುವಂತಿದ್ದರೆ, ನಮಗೆ ವಿವಾಹ ವಸನಗಳು ಅನಾವಶ್ಯಕ. (ಶ್ರೀರಾಗ. ಮೊ. ಅಷ್ಟಪದಿಗಳು, 1 : 2)

ಎಲೈ ದೇವನೆ, ನಿನಗೆ ನೀನೆ ಉಪಾಧಿ. ಆ ಉಪಾಧಿಯನ್ನು ಹೇಳುವವನೂ ಕೇಳುವವನೂ ಅದಕ್ಕೆ ಆಶ್ರಯಧಾಮವಾಗಿರುವವನೂ ನೀನೆ. ನಿನಗೆ ನೀನೆ ಭೂಷಣ. ಬೆಲೆಗಟ್ಟುವವನೂ ನೀನೆ. ನೀನು ಮೌಲ್ಯಾತೀತನಾಗಿದ್ದೀಯೆ.

ಗೌರವವೂ ನೀನೆ. ವೈಭವವೂ ನೀನೆ. ಗೌರವವೈಭವಗಳನ್ನು ನೀಡುವವನೂ ನೀನೆ. (ಶ್ರೀರಾಗ. ಮೊ. ಅಷ್ಟಪದಿಗಳು, 1 : 3)

ದೇವನೊಬ್ಬನೆ ಪರಿಶುದ್ಧ ; ಇತರರೂ ಮಾಯೆಯ ಬಲೆಗೆ ಸಿಕ್ಕಿಕೊಂಡಿದ್ದಾರೆ. (ಶ್ರೀರಾಗ. ಮೊ. ಅಷ್ಟಪದಿಗಳು, 4 : 3)

ಎಲೈ ದೇವನೆ, ನೀನು ಕಣ್ಣಿಗೆ ಕಾಣದಿದ್ದರೂ, ಎಲ್ಲರ ಹೃದಯದಲ್ಲೂ ಇದ್ದೀಯೆ. (ಶ್ರೀರಾಗ. ಮೊ. ಅಷ್ಟಪದಿಗಳು, 2 : 3)

ದೈವಭಯವಿಲ್ಲದವನು ಭಯಾಕ್ರಾಂತನಾಗಿರುತ್ತಾನೆ. ಏಕೆಂದರೆ ಅವರಿಲ್ಲದಿದ್ದರೆ ಎಲ್ಲವೂ ಅಂಧಕಾರವಾಗಿರುತ್ತದೆ.
(ಶ್ರೀರಾಗ. ಮೊ. ಅಷ್ಟಪದಿಗಳು, 3 : 3)

"ನೀನು ಉನ್ನತೋನ್ನತ"ನೆಂದು ಎಲ್ಲರೂ ಹೇಳುತ್ತಾರೆ. ಆದರೆ ನಿನ್ನನ್ನಾರು ಕಂಡಿದ್ದಾರೆ? ಓ ದೇವರೆ, ಗುರು ಮಾತ್ರ ನಿನ್ನನ್ನು ನನಗೆ ತೋರಿಸಬಲ್ಲ. ಆಮೇಲೆ ಎಲ್ಲೆಲ್ಲಿ ಕಣ್ಣಾಡಿಸಿದರೂ ಅಲ್ಲೆಲ್ಲ ನಿನ್ನನ್ನೇ ಕಾಣುತ್ತೇನೆ. (ಶ್ರೀರಾಗ. ಮೊ. ಅಷ್ಟಪದಿಗಳು, 8 : 3)

ಎಲೈ ದೇವನೆ, ನಿನ್ನ ಸಂಕಲ್ಪದಿಂದ ನಾವು ಜನ್ಮತಳೆದಿದ್ದೇವೆ. ನಿನ್ನ ಸಂಕಲ್ಪಕ್ಕನುಗುಣವಾಗಿ ನಾವು ಕೆಲಸಮಾಡುತ್ತೇವೆ. ನಿನ್ನ ಸಂಕಲ್ಪವೆ ನಮಗೆ ಸಾವು ತರುತ್ತದೆ. ನಿನ್ನ ಸಂಕಲ್ಪದಿಂದಲೆ ನಾವು ಸತ್ಯದಲ್ಲಿ ಐಕ್ಯವಾಗುತ್ತೇವೆ. (ಶ್ರೀರಾಗ. ಮೊ. ಅಷ್ಟಪದಿಗಳು, 8 : 4)

ಅರಿವಿಗೆ ಅತೀತನಾಗಿರುವವನೂ, ಅತಲಸ್ಪರ್ಶಿಯಾಗಿರುವವನೂ, ಸೃಷ್ಟಿಕರ್ತನೂ, ಕಾರಣಶಕ್ತಿಯೂ, ನಮಗೆ ಮಂಗಳಕಾರಿಯೂ ಆಗಿರುವ ಏಕೈಕ ದೇವರು, ಅವನೇ ಅಲ್ಲಾ. (ಶ್ರೀರಾಗ. ಮೊ. ಅಷ್ಟಪದಿಗಳು, 6 : 17)

ಆ ದಾನಿ ಕೊಡುತ್ತಲೇ ಇದ್ದಾನೆ; "ಸಾಕು ದೇವರೆ, ಇನ್ನು ಬೇಡ" ಎಂದು ಬೇಡುವವನೇ ಹೇಳುತ್ತಾನೆ. (ಜಾಪು. ಮೊ. 3)

ಪ್ರತಿಭೆಗಳೆಲ್ಲವೂ ದೇವನವು. ಈ ವಿಚಾರದಲ್ಲಿ ನಾವು ನಿರುಪಾಯರಾಗಿದ್ದೇವೆ. ಸುಷುಪ್ತಿಯಲ್ಲೇ ಕೆಲವರಿಗೆ ದೇವರು ಅವನ್ನು ದಯ

ಪಾಲಿಸುತ್ತಾನೆ. ಇನ್ನು ಕೆಲವರನ್ನು ನಿದ್ದೆಯಿಂದೆಬ್ಬಿಸಿ ಆಶೀರ್ವಾದಪೂರ್ವಕ ವಾಗಿ ಅವುಗಳನ್ನು ಕರುಣಿಸುತ್ತಾನೆ. (ಶ್ರೀರಾಗ. ವರ್, ಶ್ಲೋಕ, ಮೊ.)

ದೇವರು ಮೊದಲು ಪ್ರಕೃತಿಯನ್ನು ಸೃಷ್ಟಿಸುತ್ತಾನೆ. ಅನಂತರ ಅದೆಲ್ಲ ವನ್ನೂ, ವ್ಯಾಪಿಸಿಕೊಳ್ಳುತ್ತಾನೆ. (ಶ್ರೀರಾಗ. ವರ್. ಶ್ಲೋಕ. ಮೊ.)

ಸಂದೇಹ ಈ ಲೋಕದ ದಾರಿ ತಪ್ಪಿಸುತ್ತದೆ. ಆದರೆ ಅದು ದಾರಿ ತಪ್ಪುವಂತೆ ಮಾಡಿದವರಾರು? ನೀನೆ ಅಲ್ಲವೆ? (ಶ್ರೀರಾಗ. ಮೊ.)

ನನ್ನ ಗುಣಗಳನ್ನಾಗಲೀ ಅವಗುಣಗಳನ್ನಾಗಲೀ ದೇವರು ಪರಿಗಣಿಸಲಿಲ್ಲ. ತನ್ನ ಸಹಜಗುಣಕ್ಕನುಗುಣವಾಗಿ ನನ್ನನ್ನು ಆಲಿಂಗಿಸಿಕೊಂಡನು. ಈಗ ಬಿಸಿಗಾಳಿ ಸಹ ನನ್ನನ್ನು ಸೋಕುವುದಿಲ್ಲ. (ಶ್ರೀರಾಗ. ಮೊ.)

ನೀನು ಯೋಗಿಗಳಲ್ಲಿ ಯೋಗಿ, ವಿಲಾಸಿಗಳಲ್ಲಿ ವಿಲಾಸಿ. ಓ ಪ್ರಿಯ ದೇವತೆಯೆ, ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿ ಯಾರಿಗೂ ನಿನ್ನ ಇತಿಮಿತಿಗಳೇ ನೆಂಬುದು ಗೊತ್ತಿಲ್ಲ. (ಶ್ರೀರಾಗ. ಮೊ.)

ಲೋಕ ಕುರುಡಾಗಿದೆ; ದೇವನೊಬ್ಬನೆ ನೋಡಬಲ್ಲ (ಅಸ. ಮೊ 2 : 4)

ಎಲೈ ಸೃಷ್ಟಿಕರ್ತನೆ, ಎಲ್ಲ ಕಾರಣಗಳಿಗೂ ನೀನೆ ಕಾರಣನಾಗಿರುವಾಗ ನಾನೇಕೆ ಲೋಕದತ್ತ ವಾಲಲಿ, ಏತಕ್ಕಾಗಿ ವಾಲಲಿ? (ಅಸ. ಮೊ 2 : 4)

ಎಲೈ ದೇವರೆ, ನಮ್ಮ ಹೃದಯದಲ್ಲೆಷ್ಟು ಸ್ವರಗಳಿವೆಯೊ, ಅವೇ ನಿನ್ನ ಸ್ವರಗಳು. ನಮ್ಮ ಆಕಾರ ಎಷ್ಟಿದೆಯೋ ಅಷ್ಟೇ ಆಕಾರದ ಶರೀರ ನಿನ್ನದು. ರುಚಿನೋಡುವ ನಾಲಗೆಯೂ ನೀನೆ. ಮೂಸಿನೋಡುವ ಮೂಗೂ ನೀನೆ. (ಅಸ. ಮೊ 1 : 5)

ನಿನ್ನ ಮಹಿಮೆ ಹಿರಿದು; ಏಕೆಂದರೆ ನಿನ್ನ ಹೆಸರೇ ದೊಡ್ಡದು.
ನಿನ್ನ ಮಹಿಮೆ ಹಿರಿದು; ಏಕೆಂದರೆ ನಿನ್ನ ನ್ಯಾಯವೇ ಸತ್ಯ.
ನಿನ್ನ ಮಹಿಮೆ ಹಿರಿದು; ಏಕೆಂದರೆ ನಿನ್ನ ಸ್ಥಾನವೇ ಶಾಶ್ವತ.
ನಿನ್ನ ಮಹಿಮೆ ಹಿರಿದು; ನಮ್ಮ ಭಾಷೆ ನಿನಗೆ ತಿಳಿದಿದೆ.
ನಿನ್ನ ಮಹಿಮೆ ಹಿರಿದು; ಏಕೆಂದರೆ ನಮ್ಮ ಅಂತರಾಳದ ಆಲೋಚನೆಗಳಿಗೆ ದಿವ್ಯತ್ವವನ್ನುಂಟುಮಾಡುತ್ತೀಯೆ.

ನಿನ್ನ ಮಹಿಮೆ ಹಿರಿದು ; ಏಕೆಂದರೆ ಬೇಡದೆಯೆ ನೀನೆಲ್ಲ ಕೊಡುವೆ.
ನಿನ್ನ ಮಹಿಮೆ ಹಿರಿದು ; ಏಕೆಂದರೆ ನೀನೆ ಸರ್ವಸ್ವವೂ ಆಗಿದ್ದೀಯೆ.
ನಿನ್ನ ಮಹಿಮೆ ಅವರ್ಣನೀಯ ; ಏಕೆಂದರೆ ಇಂದು ಮುಂದೆಲ್ಲ ನಿನ್ನ ಸಂಕಲ್ಪದೊಳಿಹವು.

(ಅಸ. ಮೊ. ವರ್.)

ನಿನ್ನ ಲೋಕಗಳು ಸತ್ಯ, ನಿನ್ನ ವಿಶ್ವವೂ ಸತ್ಯ, ನಿನ್ನ ಕ್ಷೇತ್ರಗಳು ಸತ್ಯ, ನೀನು ಸೃಷ್ಟಿಸುವ ಆಕಾರಗಳೂ ಸತ್ಯ. ನಿನ್ನ ಕರ್ಮಗಳು ಸತ್ಯ, ನಿನ್ನ ಆಲೋಚನೆಗಳು ಸತ್ಯ. ನಿನ್ನ ಆಜ್ಞೆಯೂ ಸತ್ಯ. ನಿನ್ನ ಆಸ್ಥಾನವೂ ಸತ್ಯ. ನಿನ್ನ ಸಂಕಲ್ಪ ಸತ್ಯ, ನಿನ್ನ ವಾಣಿಯೂ ಸತ್ಯ. ನಿನ್ನ ಕೃಪೆ ಸತ್ಯ. ನಿನ್ನ ಸಂಕೇತ ಸತ್ಯ. ಕೊಟ್ಯಂತರ ಜನ ನಿನ್ನನ್ನು ಜ್ಯೋತಿಯೆಂದು, ಸತ್ಯವೆಂದು ಕರೆಯುತ್ತಾರೆ. ನಿಜದ ನೆಲೆಯಾದ ನಿನ್ನಲ್ಲಿ ಶಕ್ತಿಯಿದೆ, ಗಾಂಭೀರ್ಯವಿದೆ, ನಿನ್ನ ಸ್ತುತಿಯೂ ಸತ್ಯ, ಶ್ಲಾಘನೆಯೂ ಸತ್ಯ. ಓ ನಿಜದೊರೆಯೆ, ನಿನ್ನ ಲೀಲೆಯೆಲ್ಲ ಸತ್ಯ. (ಅಸ. ಮೊ. ವರ್. ಶ್ಲೋಕ ಮೊ)

ತನ್ನ ನಿಯತಿಗನುಗುಣವಾಗಿ ದೇವರು ವರ್ತಿಸುತ್ತಾನೆ. ಅವನಲ್ಲಿ ವಿವೇಕವೂ ಉಂಟೆಂದ ನಾನಕ. (ಅಸ, ಮೊ. ವರ್)

ದೈವಭಯದಿಂದ ವಾಯು ತನ್ನ ದಶ ಸಹಸ್ರ ಮಂದಾನಿಲಗಳೊಡಗೂಡಿ ಬೀಸುತ್ತಾನೆ. ದೈವಭಯದಿಂದಲೇ ದಶಸಹಸ್ರ ನದಿಗಳು ಹರಿಯುತ್ತವೆ. ದೈವ ಭಯದಿಂದಲೇ ಅಗ್ನಿಯೂ ಶ್ರಮಪಟ್ಟು ದುಡಿಯುತ್ತಾನೆ. ದೈವಭಯದಿಂದ ಭೂಮಿಯೂ ಸಕಲಭಾರವನ್ನು ಹೊರುತ್ತದೆ. ದೈವಭಯದಿಂದಲೇ ಮೋಡಗಳು ಗಗನದಲ್ಲಿ ಅಲೆಯುತ್ತವೆ. ದೈವಭಯದಿಂದಲೇ ಧರ್ಮರಾಜನು* ದೇವನ ಬಾಗಿಲಬಳಿ ನಿಂತಿರುತ್ತಾನೆ. ದೈವಭಯದಿಂದ ಸೂರ್ಯ ಪ್ರಜ್ವಲಿಸುತ್ತಾನೆ. ದೈವಭಯದಿಂದ ಚಂದ್ರ ಬೆಳಗುತ್ತಾನೆ. ಯುಗಗಳು ತಮ್ಮ ಅಸಂಖ್ಯಾತ ಮೈಲಿಗಳ ಅನಂತಯಾನವನ್ನು ಕೈಗೊಳ್ಳುತ್ತವೆ. ಸಿದ್ಧ ಬುದ್ಧ ನಾಥರೆಲ್ಲರೂ

* ನಮ್ಮೊಳಗೇ ಇರುವ ನ್ಯಾಯಾಧೀಶ ; ವಿವೇಕಶೀಲ ಚೇತನ. ಹಿಂದೂಗಳ ನಂಬಿಕೆಯಂತೆ ಮೃತ್ಯುದೇವತೆ ಎದುರಿನಲ್ಲಿ ನಾವು ನಮ್ಮ ಪಾಪ-ಪುಣ್ಯಗಳ ಲೆಕ್ಕವನ್ನೊಪ್ಪಿಸಬೇಕು.

ನಿನ್ನ ಭಯದಿಂದಲೇ ಕಾರ್ಯನಿರತರಾಗಿರುತ್ತಾರೆ. ನಿನ್ನ ಭಯದಿಂದಲೇ ಗಗನಮಂಡಲ ಭೂಮಿಯಮೇಲೆ ಕೊಡೆಯಂತೆ ಹರಡಿಕೊಂಡಿದೆ. ತೋಳ ಬಲ್ಮೆಯ ಯೋಧರೂ, ಶೂರರೂ ನಿನ್ನ ಭಯದಿಂದಲೇ ಕರ್ತವ್ಯನಿರತ ರಾಗಿರುತ್ತಾರೆ. ನಿನ್ನ ಭಯದಿಂದಲೇ ದೋಣಿಭರ್ತಿ ಜನ ಬಂದು ಹೋಗುತ್ತಿದ್ದಾರೆ. ಎಲ್ಲರ ತಲೆಯ ಮೇಲೂ ದೈವಭಯದ ಛಾಯೆ ಕವಿದಿದೆ. ಆ ಪರಮಾತ್ಮ ಆ ಅದ್ವಿತೀಯನೊಬ್ಬನೆ ನಿರ್ಭಯನೆಂದ ನಾನಕ.

(ಅಸ. ಮೊ. ವರ್. ಶ್ಲೋಕ. ಮೊ)

ಎಲೈ ದೇವನೇ, ನೀನೊಬ್ಬನೇ ಎಲ್ಲದರಲ್ಲಿಯೂ ಸತ್ಯರೂಪದಲ್ಲಿ ಆವಿರ್ಭವಿಸಿದ್ದೀಯೆ. (ಅಸ. ಮೊ. ವರ್)

ಎಲೈ ದೇವನೇ, ನೀನು ಸೃಷ್ಟಿಕರ್ತನಾಗಿರುವಾಗ ಸೃಷ್ಟಿಸಲು ನಾನಾರು? ಏಕೆಂದರೆ ಸೃಷ್ಟಿಸಲು ಯತ್ನಿಸಿದರೆ, ನಾನು ವಿಫಲನಾಗುತ್ತೇನೆ.

(ಅದೇ ಶ್ಲೋಕ. ಮೊ)

ಎಲೈ ದೇವನೇ ನೀನು ಸೃಷ್ಟಿಸಿದ ಜೀವಿಗಳಲ್ಲಿ ನಿನ್ನ ಬೆಳಕೇ ಇದೆ. ನಿನ್ನ ಬೆಳಕಿನಿಂದಲೇ ನಿನ್ನ ಇರವು ನಮಗೆ ಅರಿವಾಗುತ್ತದೆ. ನೀನು ಉಪಾಧಿರಹಿತನಾಗಿಯೂ ಎಲ್ಲ ಉಪಾಧಿಗಳಿಗೆ ನೀನೆ ಆಶ್ರಯಸ್ಥಾನವಾಗಿದ್ದೀಯೆ. (ಅದೇ)

ಯಾರ ಧಾರಣಶಕ್ತಿ ನಮ್ಮನ್ನು ಕಾಪಾಡುತ್ತದೆಯೋ ಆ ದೇವನಿಗೆ "ಜಯವಾಗಲಿ" ಎನ್ನೋಣ. "ಒಡೆಯನ ಮುಂದೆ ಆಜ್ಞೆ ಪ್ರಯೋಜನವಿಲ್ಲ. ಪ್ರಾರ್ಥನೆಯೇ ಫಲದಾಯಕ" ಎನ್ನುತ್ತಾನೆ ನಾನಕ. (ಅದೇ)

ಒಡೆಯನ ಭಯದಿಂದ ಬಿಡುಗಡೆಯನ್ನು ದೊರಕಿಸಿಕೊಡದಂಥ ಸೇವೆಯಿಂದೇನು ಉಪಯೋಗ? ಒಡೆಯನಲ್ಲಿ ಐಕ್ಯವಾಗುವವನೇ ನಿಜವಾದ ಸೇವಕ. (ಅದೇ)

ನನ್ನ ದೇವರು ನನಗೆ ನಿಯೋಜಿಸಿದ ಕಾರ್ಯವನ್ನು ಮಾಡುತ್ತೇನೆ.

(ಅದೇ)

ಆ ಯೋಗಿ ನಮ್ಮ ದೇವರು, ಬೀಜರಹಿತಾವಸ್ಥೆಯಲ್ಲಿ ನಿಹಿತನಾಗಿರುತ್ತಾನೆ. ಆಗ ಆತನನ್ನು ಪುರುಷನೆಂದಾಗಲಿ ಸ್ತ್ರೀಯೆಂದಾಗಲಿ ಗುರುತಿಸಲು ಸಾಧ್ಯವಾಗುವುದಿಲ್ಲ. (ಧನಶ್ರೀ. ಮೊ. ಅಷ್ಟಪದಿಗಳು. 1)

ಒಡೆಯನ ಮನೆಯ ಬಾಗಿಲ ಬಳಿ ಹೋಗಿ ಕೂಗಿ ಕರೆದರೆ ಬೇಡಿದರೆ ಒಡೆಯ ಸಾಧಕನ ಬೇಡಿಕೆಗೆ ಕಿವಿಗೊಡುತ್ತಾನೆ. ದೇವರು ಕೃಪೆದೋರಲಿ, ಶಪಿಸಲಿ, ಸಾಧಕ ಮಾತ್ರ ಅವನ ಮಹಿಮೆಯಲ್ಲಿ ಆನಂದಪರವಶನಾಗಬೇಕು. (ಆಸ. ಮೊ)

ತನ್ನ ಆ ಏಕೈಕ ಪ್ರಭುವಿನ ರಹಸ್ಯವನ್ನರಿತುದಾದರೆ, ಅವನೇ ಸ್ವತಃ ಸೃಷ್ಟಿಕರ್ತನಾಗುತ್ತಾನೆ, ದೇವರ ದೇವನಾಗುತ್ತಾನೆ. (ರಾಮಕಲೀ, ಮೊ)

ಇದೇ ನಿಜಕ್ಕೂ ದೇವರ ಅತ್ಯುಚ್ಚ ಉಪಾಧಿ : ಇರುವವನು ಅವನೊಬ್ಬನೇ. ಹಿಂದೆಯೂ ಯಾರೂ ಇದ್ದಿಲ್ಲ, ಮುಂದೆಯೂ ಬೇರಾರೂ ಇರುವುದಿಲ್ಲ. (ಆಸ. ಮೊ)

ಓ ನನ್ನೊಲವಿನ ದೇವರೇ, ನಿನ್ನ ಅಂತ್ಯವನ್ನರಿಯೆ. ಭೂಸಾಗರಗಳನ್ನೂ ಆಕಾಶವನ್ನೂ ನೀನು ವ್ಯಾಪಿಸಿಕೊಂಡಿದ್ದೀಯೆ. ನೀನು ಎಲ್ಲಗಳಲ್ಲಿಯೂ ತುಂಬಿಕೊಂಡಿದ್ದೀಯೆ. (ಸುಹಿ. ಮೊ)

ಯಾರ ಹೃದಯದಲ್ಲಿ ದೇವರು ಮನೆಮಾಡಿಕೊಂಡಿದ್ದಾನೆಯೋ ಅವನು ತನ್ನನ್ನು ತಾನೆ ಮರೆಯುತ್ತಾನೆ. (ಮರು. ಮೊ)

ಸತ್ಯ, ಕರುಣೆ, ತೃಪ್ತಿ, ವಿವೇಕ, ಶೀಲ— ಈ ಐದು ಮಹಾನ್‌ಗುಣಗಳಿಗೆ ಆವಾಸಸ್ಥಾನವಾಗಿರುವ ಶರೀರವೇ ಧನ್ಯ. ನಿರ್ಲಿಪ್ತನೂ, ನಿರಪೇಕ್ಷ ಸಮಾಧಿಯಲ್ಲಿ ಮುಳುಗಿರುವವನೂ ಆದ ದೇವನೇ ಅವರ ಮೇಲೆ ಅಧಿಕಾರ ನಡೆಸುತ್ತಾನೆ. (ಮರು. ಮೊ)

ಅರಿವಿಗೆ ನಿಲುಕದವನನ್ನು ಅರಿಯಲು ಸಾಧ್ಯವಿಲ್ಲ. ಹಾಗಾದರೆ ಅವನನ್ನು ಅರಿಯುವುದಾದರೂ ಹೇಗೆ ? ಗುರುವಿನ ಮೂಲಕವೇ ಇದು ಸಾಧ್ಯ. ಯಾವಾಗಲೂ ನಿನ್ನಲ್ಲಿಯೇ ಇರುವ ಅವನನ್ನು ನಿನಗೆ ತೋರಿಸಿಕೊಡುತ್ತಾನೆ. (ಬಸಂತ. ಮೊ)

ಎಲೈ ದೇವರೇ, ನಿನ್ನ ಆ ಅನಂತ ಮಹಾ ವೃಕ್ಷದ ಮೇಲೆ ಹಕ್ಕಿಗಳಂತೆ ನಾವು ವಾಸಮಾಡುತ್ತಿದ್ದೇವೆ. (ಗುಜ್ರಿ. ಮೊ)

ನಮ್ಮ ಆ ದೇವನಿಗೆ ತಾಯಿಯೂ ಇಲ್ಲ, ತಂದೆಯೂ ಇಲ್ಲ, ಮಗನೂ ಇಲ್ಲ, ಬಂಧುಗಳೂ ಇಲ್ಲ, ರಾಗದ್ವೇಷಾದಿಗಳೂ ಇಲ್ಲ, ಹೆಂಡತಿಯೂ ಇಲ್ಲ. ಅವನಿಗೆ ಜಾತಿಯೂ ಇಲ್ಲ, ವಂಶವೂ ಇಲ್ಲ; ಅವನು ನಿಷ್ಕಳಂಕ, ಉತ್ತಮೋತ್ತಮ, ಎಲ್ಲವನ್ನೂ ಆವರಿಸಿರುವ ಜ್ಯೋತಿಯೇ ಅವನು.

(ಸೋರಠಾ. ಮೊ)

ಮೊದಲು ವಸಂತಋತು ಪ್ರಕೃತಿಯನ್ನರಳಿಸಿತು. ಆದರೆ ದೇವರು ಅದಕ್ಕೂ ಮೊದಲೆ ಅರಳಿದ್ದನು. ಯಾರ ಮೂಲಕ ಎಲ್ಲರೂ ಅರಳುತ್ತಾರೆಯೋ ಅವನನ್ನರಳಿಸಲು ಬೇರಾರೂ ಬೇಕಿಲ್ಲ.

(ವರ್. ರಾಗ ಸುಹಿ ಮೊ : ಶ್ಲೋಕ ಮೊ)

ಪರಾತ್ಪರ ವಸ್ತುವಾದ ಭಗವಂತನು ಅಸಂಪೃಕ್ತ, ಅವಿನಾಶಿ. ಅಯೋನಿಜ, ಜಾತ್ಯತೀತ, ನಿರ್ಮುಕ್ತ. ಅವನಿಗೆ ಆಕಾರವೂ ಇಲ್ಲ, ಚಿಹ್ನೆಯೂ ಇಲ್ಲ. ಅವನು ಅತಲಸ್ಪರ್ಶಿ, ಅಗ್ರಾಹ್ಯ. (ಬಿಲವಲ. ಮೊ. ಥಿಟ್ವ)

ಆ ನಿಜತತ್ತ್ವವಾದ ಭಗವಂತನು ತನ್ನ ಕೈಗಳಿಂದಲೇ ಈ ವಿಶ್ವವನ್ನು ಸೃಷ್ಟಿಸಿದ್ದಾನೆ. ಅದರ ಅಂಡವನ್ನು ಎರಡಾಗಿ ವಿಭಜಿಸಿ ಪ್ರತ್ಯೇಕಿಸಿದನಾದರೂ ಮತ್ತೆ ಅವುಗಳನ್ನು ಒಂದುಗೂಡಿಸಿದ. ಭೂವ್ಯೋಮಾಕಾಶಗಳನ್ನು ತನ್ನ ಮನೆ ಮಾಡಿಕೊಂಡ. ಹಗಲು ರಾತ್ರಿಗಳನ್ನೂ, ಭಯ ಪ್ರೀತಿಗಳನ್ನೂ ಸೃಷ್ಟಿಸಿದ. ಅವುಗಳನ್ನು ಸೃಷ್ಟಿಸಿದ ಸೃಷ್ಟಿಕರ್ತನೇ ಅವುಗಳನ್ನೂ ನೋಡುತ್ತಿದ್ದಾನೆ. ನಮ್ಮ ದೇವರೊಬ್ಬನನ್ನು ಬಿಟ್ಟರೆ ಬೇರಾವ ಸೃಷ್ಟಿಕರ್ತನೂ ಇಲ್ಲ.

(ಬಿಲವಲ. ಮೊ. ತಿಟ್ವಿ)

ಸೃಷ್ಟಿಗೆ ಬೇರಾವ ಮೂಲವಿಲ್ಲ. (ಏಕೆಂದರೆ) ಎಲ್ಲವೂ ದೇವನಲ್ಲಿಯೇ ನಿಹಿತವಾಗಿವೆ. ಇರುವುದೆಲ್ಲ ದೇವನಿಂದಲೇ ಬಂದದ್ದು: ನಿನ್ನ ನಿಜ ದೇವರು ಯುಗಯುಗಾಂತರಗಳಿಂದಲೂ ಅದೇ ರೀತಿ ಇದ್ದಾನೆ. ನಿನ್ನ ದೇವರನ್ನು ಬಿಟ್ಟರೆ, ಸೃಷ್ಟಿ, ಲಯಕಾರ್ಯಗಳನ್ನು ಕೈಗೊಳ್ಳುವಂಥವರು ಬೇರಾರೂ ಇಲ್ಲ.

(ರಾಮಕಲೀ. ಮೊ 6)

ಸೃಷ್ಟಿಗೆ ಬೇರಾವ ಆಕರವೂ ಇಲ್ಲ. (ಏಕೆಂದರೆ) ಎಲ್ಲವೂ ದೇವನಲ್ಲಿಯೇ ನಿಹಿತವಾಗಿವೆ. ಇರುವುದೆಲ್ಲ ದೇವನಿಂದಲೇ ಬಂದದ್ದು.

(ರಾಮಕಲೀ. ಮೊ 6)

ಸದ್ಯಃಸ್ಫೂರ್ತಿಯಿಂದ ದೇವರು ಇಡೀ ಜಗತ್ತನ್ನೆ ಸೃಷ್ಟಿಸಿದ. ತನ್ನ ಜ್ಯೋತಿಯಿಂದ ಮೂರು ಲೋಕಗಳನ್ನೂ ವ್ಯಾಪಿಸಿಕೊಂಡ.

(ರಾಮಕಲೀ. ಮೊ. ದಖ್ನೀ, ಓಂಕಾರ್ 2)

ಒಬ್ಬನೇ ದೇವರು ಎಲ್ಲ ರೀತಿಗಳಲ್ಲಿ ಎಲ್ಲ ಆಕಾರಗಳಲ್ಲಿ ಎಲ್ಲ ವರ್ಣಗಳಲ್ಲಿ ವ್ಯಕ್ತವಾಗಿರುತ್ತಾನೆ. ವಾಯು, ಜಲ ಮತ್ತು ಅಗ್ನಿಗಳ ಮೂಲಕ ಕ್ರಿಯಾಶೀಲನಾಗಿರುವವನೂ ಅವನೇ. ಆ ಒಂದು ಆತ್ಮ ಮೂರು ಲೋಕಗಳಲ್ಲಿಯೂ ಸಂಚರಿಸುತ್ತದೆ. (ರಾಮಕಲೀ ಮೊ. ದಖ್ನೀ, ಓಂಕಾರ್ 2)

ಅವನು ಅವನೇ ಆಗಿದ್ದಾನೆ. ಇಂದ್ರಿಯಗಳ ಅರಿವಿನ ಮೇರೆಯನ್ನು ಮೀರದವನಾಗಿದ್ದಾನೆ. (ರಾಮಕಲೀ. ಮೊ. ದಖ್ನೀ, ಓಂಕಾರ್ 15)

ನಿರುಪಾಧಿಕ ತತ್ತ್ವದಿಂದ ಸ್ವಯಂಪ್ರೇರಿತನಾಗಿ ಅವನು ಅಭಿವ್ಯಕ್ತಗೊಂಡನು. ಆ ಪರಿಶುದ್ಧ ಚೇತನವೇ ಅವನು. ಉಪಾಧಿರಹಿತನಾಗಿದ್ದವನು ಸೋಪಾಧಿಯೂ ಆದನು. (ರಾಮಕಲೀ. ಮೊ. ದಖ್ನೀ, ಓಂಕಾರ್ 24)

ದೇವರು ನಮ್ಮೊಳಗೂ ಇದ್ದಾನೆ, ನಮ್ಮ ಹೊರಗೂ ಇದ್ದಾನೆ; ದೇವರು ಮೂರು ಲೋಕಗಳಲ್ಲಿಯೂ ಇದ್ದಾನೆ. (ರಾಮಕಲೀ. ಮೊ. ಸಿದ್ಧಗೋಷ್ಠಿ)

ದೇವರು ಸಂಕಲ್ಪಿಸಿದರೆ ಕಾಗೆಯೂ 'ಹಂಸ'ವಾಗುತ್ತದೆ. (ಮೊ)

ನಾನು ನನ್ನ ಸ್ನೇಹಿತನನ್ನು ಅರಸುತ್ತಲೇ ಇದ್ದೇನೆ. ಆದರೆ ಆ ಸ್ನೇಹಿತನೋ ಎಂದೆಂದಿಗೂ ನನ್ನ ಜೊತೆಯಲ್ಲಿಯೇ ಇದ್ದಾನೆ. ಅವನೋ ಅಗೋಚರ. ಆದರೆ ಗುರುವಿನ ಮೂಲಕ ಅವನನ್ನು ಕಾಣಬಹುದೆಂದ ನಾನಕ. (ಮೊ)

ಶರೀರವೆಂಬ ನಗರದಲ್ಲಿ ಮನಸ್ಸೆಂಬ ಕೋಟೆ ಇದೆ. ಮನಸ್ಸೆಂಬ ಗಗನದ ಹತ್ತನೆಯ ದ್ವಾರದಲ್ಲಿ ಸತ್ಯರೂಪಿಯಾದ ಆ ದೇವರು ವಾಸಿಸುತ್ತಿದ್ದಾನೆ.

(ಮರು. ಮೊ. ದಖ್ನೀ)

ನೀರು ಅಗ್ನಿಯನ್ನು ಶಮನಗೊಳಿಸುತ್ತದೆ. ದೇವರು ಆ ಅಗ್ನಿಯನ್ನು ಸಾಗರಗಳಲ್ಲಿಯೂ ಇರಿಸಿದ್ದಾನೆ. (ಅದೇ)

ಎಲೈ ದೇವರೆ, ನೀನೇ ಬಡವರ ಐಶ್ವರ್ಯ. ಗುರುವಿಹೀನರಿಗೆ ನೀನೇ ಗುರು. ಅಖ್ಯಾತರ ಖ್ಯಾತಿಯೂ ನೀನೆ. ಅಬಲರಿಗೆ ಬಲವೂ ನೀನೆ. ಓ ರತ್ನವೆ, ಕುರುಡರಿಗೆ ಬೆಳಕೂ ನೀನೆ ಎಂದ ನಾನಕ್. (ಮರು. ಮೊ.)

## ಲೋಕ

ಅನೇಕ ಯುಗಗಳವರೆಗೆ ಪ್ರಳಯದ ಮೇಲೆ ಪ್ರಳಯವಾಗುತ್ತಿತ್ತು. ಆ ಪ್ರಳಯಗಳ ಮಧ್ಯದಲ್ಲೂ ಅನಂತನೂ, ಸೀಮಾರಹಿತನೂ ಆದ ಭಗವಂತನು ಆತ್ಮಲೀನನಾಗಿ. ನಿರ್ಲಿಪ್ತನಾಗಿ ಏಕಾಂಗಿಯಾಗಿ ಕುಳಿತಿದ್ದನು. ಕೃತಯುಗ ಇನ್ನೂ ಉದಿಸಿರಲಿಲ್ಲ. ಈ ರೀತಿ ಮುವ್ವತ್ತಾರು ಯುಗಗಳು ಕಳೆದುಹೋದವು. ತನ್ನ ಸಂಕಲ್ಪದಂತೆ ಆ ಪರಮಾತ್ಮ ಕಾರ್ಯಮಗ್ನನಾಗಿದ್ದನು. ಆತ ಅನಂತನೂ, ಸೀಮಾರಹಿತನೂ ಆಗಿದ್ದುದರಿಂದ ಆತನಿಗೆ ಬೇರಾವ ಎಮರಾ ಳಿಯೂ ಇರಲಿಲ್ಲ. ಮುಂದೆ ಅವರು ನಾಲ್ಕು ಯುಗಗಳನ್ನು ಕಲ್ಪಿಸಿದಾಗ, ಎಲ್ಲ ಯುಗಗಳಲ್ಲಿಯೂ ಅಂತರ್ಯಾಮಿಯಾದನು. ಎಲ್ಲರ ಹೃದಯವನ್ನೂ ಅವನು ವ್ಯಾಪಿಸಿಕೊಂಡನು. ಎಲ್ಲ ಯುಗಗಳಲ್ಲಿಯೂ ಇದ್ದವನು ಅವನೊಬ್ಬನೆ. (ಮರು. ಮೊ.)

ಅಸಂಸಕ್ತನಾಗಿ ದೇವರು ತನ್ನನ್ನು ತಾನೇ ಸೃಷ್ಟಿಸಿಕೊಂಡನು. ಕರುಣಾಳು ವಾದ ಅವನು ತನ್ನ ನಿಜ ನೆಲೆಯನ್ನು ಸೃಷ್ಟಿಸಿದನು. ಜಲಾಗ್ನಿವಾಯುಗಳನ್ನು ಒಟ್ಟುಗೂಡಿಸಿ, ಅವುಗಳಿಂದ ಶರೀರವೆಂಬ ಕೋಟೆಯನ್ನು ನಿರ್ಮಿಸಿದನು. ಅದಕ್ಕೆ ಸೃಷ್ಟಿಕರ್ತನಾದ ಪರಮಾತ್ಮ ನವದ್ವಾರಗಳನ್ನು ಕಲ್ಪಿಸಿದನು. ಅಮೇಯನೂ, ಅನಂತನೂ ಆದ ತಾನೇ ಹತ್ತನೆಯ ದ್ವಾರದಲ್ಲಿ ವಾಸಿಸು ತ್ತಿದ್ದಾನೆ. (ಮರು. ಮೊ.)

ಸರ್ವಾತಿಕ್ರಾಂತನಾದ ಪರಮಾತ್ಮನು ತನ್ನ ಬೀಜರಹಿತ ಸಮಾಧಿಯಲ್ಲಿ ಕುಳಿತಿದ್ದನು. ಅನಂತನಾದ ಅವನು ಅಸಂಸಕ್ತನಾಗಿ ತಾನೇ ಸ್ವತಃ ಪ್ರಕೃತಿ ಯನ್ನು ಸೃಷ್ಟಿಸಿದನು. ಓಹ್, ಆ ಅವ್ಯವಸ್ಥಿತ ಸ್ಥಿತಿಯಿಂದಲೇ ಜಡ ಪ್ರಕೃತಿ ಮೂಡಿಬಂತು. ಆತನ ನಿರುಪಾಧಿಕ ಸತ್ವದಿಂದ ವಾಯು, ಜಲ ಮತ್ತು ಸಮಸ್ತ ವಿಶ್ವ, ಶರೀರವೆಂಬ ಕೋಟೆ ಹಾಗೂ ಅದರೊಳಗೆ ರಾಜಸದೃಶವಾದ ಮನಸ್ಸು—ಇವುಗಳೆಲ್ಲ ಮೂಡಿದುವು. ಶರೀರದ ಜಲಾಗ್ನಿಗಳೊಡನೆ ತನ್ನ ತೇಜಸ್ಸನ್ನೂ ಸಮಾವೇಶಗೊಳಿಸಿದನು. ಆತನ ನಿರುಪಾಧಿಕ ಆತ್ಮದಲ್ಲಿ ಸಮಸ್ತ ಸೃಷ್ಟಿಶಕ್ತಿಯೂ ನಿಹಿತವಾಗಿದ್ದಿತು. ಅವನ ನಿರುಪಾಧಿಕ ಆತ್ಮದಿಂದಲೇ ಬ್ರಹ್ಮ, ವಿಷ್ಣು, ಮಹೇಶ್ವರರೂ ಮೂಡಿ ಬಂದರು. ಎಲ್ಲ ಲೋಕಗಳಲ್ಲಿಯೂ ಅವನ ನಿರುಪಾಧಿಕ ಆತ್ಮ ವಿಜೃಂಭಿಸಿತು. (ಮರು. ಮೊ.)

ಅವನ ನಿರುಪಾಧಿಕ ಆತ್ಮದಿಂದಲೇ ಏಳು ಅಧೋಲೋಕಗಳು ಸೃಷ್ಟಿ ಗೊಂಡವು. ಎಲ್ಲ ಲೋಕಗಳೂ ಅವನ ನಿರುಪಾಧಿಕ ಆತ್ಮವನ್ನೇ ಆಶ್ರಯಿಸಿ ಕೊಂಡಿದ್ದುವು. ಆ ಅನಂತನೇ ಇವೆಲ್ಲವುಗಳ ಅಸ್ತಿತ್ವಕ್ಕೆ ಕಾರಣನಾದನು. ಪ್ರತಿಯೊಂದೂ ಅವನ ಸಂಕಲ್ಪದಂತೆಯೇ ನಡೆಯಿತು. ಆತನ ಆತ್ಮದಿಂದಲೇ ಮೂರು ಕಲ್ಪಗಳೂ ಮೂಡಿದುವು. ಹುಟ್ಟು ಸಾವು ಮತ್ತು ಅಹಂಕಾರದ ನೋವು ಕೂಡ ಅದರಿಂದಲೇ ಮೂಡಿದುವು. (ಮರು. ಮೊ.)

ಅವನ ನಿರುಪಾಧಿಕ ಆತ್ಮದಿಂದಲೇ ಪಂಚಭೂತಗಳೂ ಮೂಡಿದುವು. (ಮರು. ಮೊ.)

ಎಲ್ಲ ಜೀವಿಗಳಲ್ಲಿಯೂ ಅವನು ರಹಸ್ಯಾತ್ಮಕ ರೀತಿಯಲ್ಲಿ ವ್ಯಾಪಿಸಿಕೊಂಡಿ ದ್ದಾನೆ. ಆದರೆ, ನಮ್ಮೊಡೆಯನಾದ ಅವನು ಯಾವಾಗಲೂ ಸಂಸಕ್ತನಾಗಿಯೇ ಉಳಿಯುತ್ತಾನೆ. ವಿಶ್ವವೇ ಅವನ ಪ್ರತಿಬಿಂಬ. ಅವನಿಗೆ ತಂದೆಯೂ ಇಲ್ಲ, ತಾಯಿಯೂ ಇಲ್ಲ, ಸೋದರ ಸೋದರಿಯರಿಲ್ಲ, ಹುಟ್ಟೂ ಇಲ್ಲ, ಸಾವೂ ಇಲ್ಲ. ಯಾವ ವರ್ಗಕ್ಕೂ, ಯಾವ ಬಣಕ್ಕೂ ಸೇರಿದವನಲ್ಲ. ಆ ಅನಾದಿ ಪರಮಾತ್ಮ ನನ್ನ ಮನಸ್ಸಿಗೆ ಪ್ರಿಯನಾಗಿದ್ದಾನೆ. (ಮರು. ಮೊ.)

ಈ ವಿಶ್ವ ಚಲಿಸುತ್ತಲೇ ಇದೆ. ಮೂರು ಕಲ್ಪಗಳಲ್ಲಿ ಅದು ಅಸ್ತಿತ್ವವನ್ನು ಹೊಂದಿರುತ್ತದೆ. ಆದರೆ ನಿನ್ನ ನೆಲೆ ಇರುವುದು ನಾಲ್ಕನೆಯ ಕಲ್ಪದಲ್ಲಿ.

ನೀನು ಅವುಗಳನ್ನು ಮೆಟ್ಟಿ ನಿಂತಿದ್ದೀಯೆ. ಹುಟ್ಟು, ಸಾವುಗಳನ್ನು ಮೀರಿ ನಿಂತಿದ್ದೀಯೆ. ಜೀವಿಗಳಿಗೆ ನೀನೆ ಜೀವ, ಪರಿಶುದ್ಧ ಬೆಳಕು. ಗುರುವಿನ ಕೃಪೆಯಿಂದ ಅನ್ಹಹದನಾದದ ಮೂಲಕ ನಿನ್ನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. (ಮರು. ಮೊ.)

ದೇವನ ಸನ್ನಿಧಿಯೆ ಸತ್ಯ. ಅವನು ಅಮೇಯ, ಪರಮಪುರುಷ. ಅವನ ಮಾನಕ ಅಥವಾ ಆದರ್ಶವೂ ಸತ್ಯವೆ. ಎಲ್ಲರೂ ಅವನ ಸಂಕಲ್ಪಕ್ಕೆ ಬಾಧ್ಯರು. (ಮರು. ಮೊ.)

ದೇವರು ಆತ್ಮನಿವಾಸಿ, ಆತ್ಮವು ದೇವನಿವಾಸಿ. ಗುರುಬೋಧೆಯಿಂದ ನಾವು ಕಲಿತುಕೊಳ್ಳುವುದು ಇದನ್ನೆ. (ಭೈರೋ ಅಷ್ಟಪದಿಗಳು. ಮೊ)

ಯಾರಲ್ಲಿ ದೇವನು ವಾಸಿಸುತ್ತಾನೆಯೋ ಅವನು ಮಾತ್ರವೇ ಬದುಕುತ್ತಾನೆ. (ಮಜ್ಹ್. ಮೊ. ವರ್)

## ಭಗವನ್ನಾಮ

ಎಲೈ ದೇವನೆ, ನಿನ್ನೆಲ್ಲ ಹೆಸರುಗಳಿಗೆ ನನ್ನನ್ನು ನಾನೇ ಸಮರ್ಪಿಸಿಕೊಳ್ಳುತ್ತೇನೆ. (ಬಸಂತ್. ಮೊ.)

ದೇವರ ನಾಮ ನೆಲಸಿರುವ ಶರೀರವೆ ಪರಮಪವಿತ್ರ. (ಶ್ರೀರಾಗ. ಮೊ 2 : 15)

ಭಗವನ್ನಾಮದ ನೆರವಿಲ್ಲದೆ ಹೋದರೆ, ನಿನ್ನ ದುಃಖಗಳೇ ನಿನ್ನನ್ನು ಬೂದಿಯಾಗಿಸಿಬಿಡುತ್ತವೆ. (ಶ್ರೀರಾಗ. ಮೊ. 3 : 17)

ದೇವನು ತನ್ನನ್ನು ತಾನೆ ಸೃಷ್ಟಿಸಿಕೊಂಡನು. ತನಗೆ ತಾನೆ ಹೆಸರಿಟ್ಟುಕೊಂಡನು. (ಅಸ. ಮೊ. ವರ್)

ನಾಲಗೆಯಿಂದಲ್ಲದೆ ಹೃದಯದಿಂದ ಜಪಿಸುವುದೆ ಭಗವನ್ನಾಮ ಸ್ಮರಣೆ. ಆ ನಾಮ ಯಾವ ಬಗೆಯದೆಂಬುದನ್ನು ಅರಿತವರೇ ವಿರಳ. (ಮಲ್ಹಾರ್. ಮೊ)

ಭಗವನ್ನಾಮ ಉನ್ಮಾದಕಾರಕ. ದಿವಾ ರಾತ್ರಿ ನನ್ನನ್ನದು ಉನ್ಮತ್ತತೆಯಲ್ಲಿರಿಸುತ್ತದೆ. (ಮೊ)

ಅತ್ಯಂತ ಮಧುರವೂ ಪ್ರಿಯವೂ ಆದ ಭಗವನ್ನಾಮ ಅಗೋಚರವಾದುದು, ಇಂದ್ರಿಯಾತೀತವಾದದ್ದು. (ಮರು. ಮೊ)

ಭಗವನ್ನಾಮದ ಪ್ರಣವವನ್ನು ನಾನು ನನ್ನ ಹೃದಯದಲ್ಲಿ ಸಮಾಗಮಗೊಳಿಸಿಕೊಂಡಿದ್ದೇನೆ. ಎಲೈ ದೇವನೆ, ಯಾರಿಗೆ ನೀನದನ್ನು ಅನುಗ್ರಹಿಸುತ್ತೀಯೋ, ಆತನು ಮುಕ್ತನಾಗುತ್ತಾನೆ. ಈ ಐಶ್ವರ್ಯವನ್ನು ಯಾರೂ ಸುಡಲಾರರು, ಕದಿಯಲಾರರು, ಮುಳುಗಿಸಲಾರರು, ನಾಶಪಡಿಸಲಾರರು.
(ಮರು. ಮೊ)

ನನಗೆ ಬೇರಾವ ಧ್ಯಾನವಾಗಲೀ, ಜ್ಞಾನವಾಗಲೀ ತಿಳಿದಿಲ್ಲ. ನಾನು ಯಾವ ವೇಷಗಳನ್ನೂ ಧರಿಸುವುದಿಲ್ಲ. ನನ್ನ ಸಂಕಲ್ಪವನ್ನೂ ಹೇರುವುದಿಲ್ಲ. ಏಕೆಂದರೆ ನನ್ನ ಹೃದಯದಲ್ಲಿ ನೆಲೆಗೊಂಡಿರುವ ಆ ಭಗವನ್ನಾಮವನ್ನು, ಆ ಶಾಶ್ವತ ಸತ್ಯವನ್ನು ನಾನಾಗಲೇ ಗ್ರಹಿಸಿದ್ದೇನೆ. (ಬಿಲವಲ್. ಮೊ.)

ದೇವನ ಹೆಸರೇ ಸತ್ಯ. (ಮರು. ಮೊ)

ಭಗವನ್ನಾಮ ಮನಸ್ಸನ್ನು ಹೊಕ್ಕಮೇಲೆ ಎಲ್ಲ ಚಿಂತೆಗಳೂ ದೂರವಾಗುತ್ತವೆ. (ಶ್ರೀರಾಗ. ಮೊ)

ಭಗವನ್ನಾಮ ಸ್ಮರಣೆಯಲ್ಲಿ ಎಲ್ಲ ತಪಸ್ಸುಗಳ, ಎಲ್ಲ ಧ್ಯಾನಗಳ ಸಾರ ಅಡಗಿದೆ. (ಧನಶ್ರೀ. ಮೊ.)

ಕಲಿಯುಗದಲ್ಲಿ ಭಗವನ್ನಾಮವೇ ಅತ್ಯುತ್ಕೃಷ್ಟವಾದ ವಸ್ತು.
(ಧನಶ್ರೀ. ಮೊ 8)

ಭಗವಂತನ ಅಕಳಂಕ ನಾಮ ಅಹಂಕಾರದ ಕೊಳೆಯನ್ನು ತೊಳೆದು ಹಾಕುತ್ತದೆ. (ಧನಶ್ರೀ. ಮೊ 2)

ನಾನಕ್ ಹೇಳುತ್ತಾನೆ : "ಮಾಧುರ್ಯವೇ ಭಗವನ್ನಾಮದ ವಿಶಿಷ್ಟ ಸಾರ. ಭಗವನ್ನಾಮ ಎಲ್ಲ ಬಗೆಯ ತೃಷ್ಣೆಗಳನ್ನು ಶಮನಗೊಳಿಸುತ್ತದೆ."
(ಧನಶ್ರೀ. ಮೊ 2)

ಸತ್ಯ, ತೃಪ್ತಿ ಮತ್ತು ಇಂದ್ರಿಯ ನಿಗ್ರಹ—ಇವು ನಿನ್ನ ಸಂಗಾತಿಗಳಾಗಿರಲಿ. ಗುರುಕೃಪೆಯಿಂದ ಭಗವನ್ನಾಮ ಸ್ಮರಣೆಯ ಆನಂದವನ್ನನುಭವಿಸುತ್ತೀಯೆ ಎಂದ ನಾನಕ. (ರಾಮಕಲೀ. ಮೊ. ಸಿದ್ಧಗೋಷ್ಠಿ)

ಇರುವುದೆಲ್ಲವೂ ಭಗವಂತನ ಹೆಸರಿನ ಮೂಲಕ ಅಭಿವ್ಯಕ್ತಗೊಂಡಿದೆ. ಭಗವನ್ನಾಮದ ಮೂಲಕವೇ ಎಲ್ಲ ಜ್ಞಾನವೂ ಲಭ್ಯವಾಗುತ್ತದೆ. (ಅದೇ)

ನಿಜವಾದ ಗುರುವಿನ ಮೂಲಕವೆ ಭಕ್ತ ಭಗವನ್ನಾಮದ ಪ್ರಣವವನ್ನು ಪಡೆಯುತ್ತಾನೆ. ಆ ಪ್ರಣವದಿಂದಲೇ ತನ್ನ ಪಥವನ್ನೂ ಕಂಡುಕೊಳ್ಳುತ್ತಾನೆ. (ಅದೇ)

ಭಗವನ್ನಾಮವೊಂದೇ ಶಾಶ್ವತ ಪ್ರಭಾವವುಳ್ಳದ್ದು. ಕೇಳಿ, ಇದೇ ಗುರುವಿನ ಸದುಪದೇಶ. (ರಾಮಕಲೀ. ಮೊ. ದಖ್ನಿ ಓಂಕಾರ್ 11)

ಈ ಚಪಲಚಿತ್ತವನ್ನು ಸತ್ಯವೇ ಹಿಡಿದಿಟ್ಟುಕೊಂಡಿದೆ. ಸತ್ಯವೇ ಅದರ ನಿಜವಾದ ನಿಲಯ. ಭಗವನ್ನಾಮದ ಬೆಂಬಲವಿರುವಾಗ ಹೀಗಾಗುವುದು ಸಾಧ್ಯ. (ರಾಮಕಲೀ. ಮೊ. ಸಿದ್ಧಗೋಷ್ಠಿ)

ಭಗವನ್ನಾಮಾಮೃತಪಾನದಿಂದ ಭಕ್ತನ ಅಹಂಕಾರ ಹರಿಯುತ್ತದೆ.
ಪ್ರಣವೋಪದೇಶದಿಂದ ಸತ್ಯನಿವಾಸಿಯಾಗುತ್ತಾನೆ.
ಪ್ರಣವೋಪದೇಶದಿಂದ ಯೋಗದ ಪಥ ಅರಿವಾಗುತ್ತದೆ.
ಭಗವನ್ನಾಮಾಮೃತ ಪಾನದಿಂದ ನಿರ್ಮುಕ್ತನಾಗುತ್ತಾನೆ;
ತ್ರಿಲೋಕಗಳ ರಹಸ್ಯ ಅರಿವಾಗುತ್ತದೆ; ಸದಾನಂದಲೀನನಾಗುತ್ತಾನೆ.
(ರಾಮಕಲೀ. ಮೊ. ಸಿದ್ಧಗೋಷ್ಠಿ 32)

ಭಗವನ್ನಾಮವೇ ಎಲ್ಲ ಕರ್ಮಗಳ ಸಾರ. ಭಗವನ್ನಾಮವಿಲ್ಲದಿದ್ದಲ್ಲಿ ಸಾವು ನೋವು ಸಂಭವಿಸುತ್ತವೆ. (ರಾಮಕಲೀ. ಮೊ. ಸಿದ್ಧಗೋಷ್ಠಿ 50)

ಅಕಳಂಕ ನಾಮಸ್ಮರಣೆಯ ವಿಧಾನವನ್ನರಿತ ಯೋಗಿಗೆ ನೆಲದ ಒಂದು ಕಣವೂ ಅಂಟಿಕೊಳ್ಳಲಾರದು. (ಮರು, ಮೊ.)

ನನ್ನ ನಾಲಗೆಯೆ ತಕ್ಕಡಿ (ಯ ದಂಡ). ಹೃದಯವೆ ಬಟ್ಟು. ಅದರಲ್ಲಿ ಅಪ್ರಮೇಯವಾದ ಹೆಸರನ್ನಿಟ್ಟು ತೂಕ ನೋಡುತ್ತೇನೆ. (ಮರು. ಮೊ. 11)

ಭಗವನ್ನಾಮ ಸ್ಮರಣೆಯಿಂದ ಅರುವತ್ತೆಂಟು ತೀರ್ಥಕ್ಷೇತ್ರಗಳ ಯಾತ್ರೆಯ ಪುಣ್ಯ ದೊರೆಯುತ್ತದೆ. ಅದರಿಂದ, ಎಲ್ಲ ಪಾಪಗಳೂ ಕ್ಷಯಿಸುತ್ತವೆ. ಕುರುಡ ನಂತಿರುವ ಬುದ್ಧಿಹೀನ ನೀರನ್ನು ಕಡೆದು ಅಮೃತವನ್ನರಸಲು ಪ್ರಯತ್ನಿಸು ತ್ತಾನೆ. ಗುರೂಪದೇಶಕ್ಕನುಗುಣವಾಗಿ ಧರ್ಮಾಚರಣೆಯ ದಧಿಯನ್ನು ಮಥಿ ಸಿದರೆ ಭಗವನ್ನಾಮದ ನವನೀತವೇ ದೊರೆಯುತ್ತದೆ.

(ರಾಗ ಮರು. ಅಷ್ಟಪದಿಗಳು. ಮೊ)

ನಿಜವಾದ ಭಗವನ್ನಾಮದತ್ತ ವಾಲಿದರೆ ಸತ್ಯವೇ ಸಾಹಚರ್ಯವಾಗು ತ್ತದೆ; ಸತ್ಯವೇ ಸ್ವರ್ಗವಾಗುತ್ತದೆ; ಸತ್ಯವೇ ಮನೆಯಾಗುತ್ತದೆ; ಸತ್ಯವೇ ಆಹಾರವಾಗುತ್ತದೆ; ಸತ್ಯವೇ ಪ್ರೇಮವಾಗುತ್ತದೆ.

(ರಾಗ ಮರು. ಅಷ್ಟಪದಿಗಳು. ಮೊ)

## ಗುರು

ಗುರುವಿನ ಪುಣ್ಯಾಶ್ರಮದಲ್ಲಿ ಪ್ರವೇಶ ಪಡೆದವರು ಅನಾದಿ ಕಾಲದಿಂದಲೂ ಆ ಪುಣ್ಯಕ್ಕೆ ಭಾಜನರಾಗಿರುವವರು. (ಅಸ. ಮೊ 4.4)

ಒಮ್ಮೆ ಗುರುವಿನ ಉಪದೇಶವನ್ನು ಪಡೆದನೆಂದರೆ ದೈವಭಯ ಪ್ರಾರಂಭ ವಾಗುತ್ತದೆ. (ಶ್ರೀರಾಗ. ಮೊ 4.10)

ಸತ್ಯಾಚರಣೆಯುಳ್ಳವರು ಗುರುವಿನ ಪ್ರೀತಿಗೆ ಪಾತ್ರರಾಗುತ್ತಾರೆ.

(ಶ್ರೀರಾಗ. ಮೊ. 4.11)

ನಿಜವಾದ ಗುರುವನ್ನು ಕಂಡಾಗ ವಿವೇಕ ಮಣಿಯನ್ನು ಪಡೆದ ಪುಣ್ಯಜೀವಿ ಗಳಾಗುತ್ತೇವೆ. ನಮ್ಮ ಮನಸ್ಸನ್ನು ಗುರುವಿಗೆ ಶರಣಾಗಿಸಿ ಪ್ರೇಮಮಯನಾದ ದೇವನನ್ನು ಪಡೆಯುತ್ತೇವೆ. ಮುಕ್ತಿಯ ಉಪಹಾರ ನಮಗೆ ದೊರೆಯುತ್ತದೆ. ನಮ್ಮ ಪಾಪಗಳೆಲ್ಲ ತೊಳೆದುಹೋಗುತ್ತವೆ.

(ಶ್ರೀರಾಗ. ಮೊ. ಅಷ್ಟಪದಿಗಳು 1.10)

ತಡವಿಲ್ಲದೆ ಮಾನವರನ್ನು ದೇವತೆಗಳನ್ನಾಗಿಸಿದ ನನ್ನ ಗುರುವಿಗೆ ದಿನವೂ ದಶಸಹಸ್ರ ಬಾರಿ ನನ್ನನ್ನೇ ನಾನು ಸಮರ್ಪಿಸಿಕೊಳ್ಳುತ್ತೇನೆ.
(ಆಸ. ಮೊ. ವರ್ ಶ್ಲೋಕ. ಮೊ)

ಗುರುವಿನ ಮಹಿಮೆ ಎಷ್ಟು ಅಗಾಧವಾಗಿದೆಯೆಂದರೆ, ಗೃಹಕೃತ್ಯಗಳ ಮಧ್ಯೆ ಇದ್ದರೂ ಅವನು ಮುಕ್ತನಾಗುತ್ತಾನೆ. (ಧನಶ್ರೀ. ಮೊ. 4)

ಗುರು ಮುತ್ತುರತ್ನಗಳಿಂದ ಕೂಡಿದ ಸಾಗರ. ಸಂತರು (ಹಂಸದಂತೆ) ಮುತ್ತುರತ್ನಗಳನ್ನು ಮಾತ್ರ ಆಯ್ದುಕೊಳ್ಳುತ್ತಾರೆ. ಗುರುವಿಗೆ ಅಂಟಿ ಕೊಂಡಿರುತ್ತಾರೆ. (ಧನಶ್ರೀ. ಮೊ. ಅಷ್ಟಪದಿಗಳು)

ಗುರು ದತ್ತಜ್ಞಾನವೆ ಶಾಶ್ವತ ತೀರ್ಥಸ್ಥಳ. ಅಲ್ಲಿ ನಮ್ಮೆಲ್ಲ ಪಾಪಗಳನ್ನೂ ತೊಳೆದುಕೊಳ್ಳಬಹುದು. (ಧನಶ್ರೀ. ಮೊ. ಛಾಂಟ್ 1)

ಗುರುದ್ವಾರದ ಮೂಲಕ ಹಾದು ಬಂದರೆ ಮಾತ್ರ ಒಳಗಣ್ಣು ತೆರೆಯುವ ಸೌಭಾಗ್ಯ ನಮ್ಮದಾಗುತ್ತದೆ. ಗುರುಜ್ಞಾನದಿಂದ ನಮ್ಮ ಪಾತ್ರೆಯನ್ನು ನಾವು ತೊಳೆದಾಗ ಅದು ಮಿಂಚತೊಡಗುತ್ತದೆ. (ಸುಹಿ. ಮೊ. 8)

ಪರಮಗುರುವಿನ ಭೇಟಿಯಾದದ್ದೇ ಆದರೆ ನಮ್ಮ ಸಂದೇಹಗಳು ನುಚ್ಚು ನೂರಾಗುತ್ತವೆ, ಮನಸ್ಸಿನ ತೊಳಲಾಟ ನಿಲ್ಲುತ್ತದೆ. ಅನಂತರ (ಮಾನಸ) ಸ್ರೋತದಿಂದ (ಸುಧೆ) ಪ್ರವಿಸತೊಡಗುತ್ತದೆ. ಪರಮಾನಂದ ಸಂಗೀತ ದೊಡನೆ ನಮ್ಮ ಎದೆ ಮಿಡಿಯುತ್ತದೆ. ಆ ಎದೆ ದೇಗುಲದಲ್ಲಿಯೇ ನಮ್ಮೊಡೆಯ ನನ್ನು ಕಾಣುತ್ತೇವೆ. (ಸುಹಿ. ಮೊ. 8)

ಗುರುವಿನ ಜ್ಞಾನದಿಂದ ನನ್ನ ಮನಸ್ಸು ಸಮಸ್ಥಿತಿಹೊಂದಿ ದೇವನೊಡನೆ ಸಮರಸಗೊಳ್ಳುತ್ತದೆ. (ಬಿಲವಲ್. ಮೂ.)

ನಿಜವಾದ ಗುರುವಿನ ಆಶ್ರಯ ಲಭ್ಯವಾದಾಗ ಮಾನವ ಇತರ ಚಿಂತೆ ಗಳಿಂದ ಮುಕ್ತನಾಗುತ್ತಾನೆ. ಅವನೆಲ್ಲ ಪಾಪಗಳೂ ತೊಳೆದುಹೋಗುತ್ತವೆ. ಪಾಪಶೀಲ ಮನಸ್ಸೂ ಶುದ್ಧವಾಗುತ್ತದೆ. ಶರೀರ ಚಿನ್ನದಂತೆ ಮಿಂಚ ತೊಡಗುತ್ತದೆ. ಆತ್ಮ ಪರಮಾತ್ಮನಲ್ಲಿ ಲೀನವಾಗುತ್ತದೆ. (ಬಿಲವಲ್. ಮೊ. 3)

ಗುರುವಿನ ಮಾತೇ ನಾದ, ಗುರುವಿನ ಮಾತೇ ವೇದ. ಏಕೆಂದರೆ ಅವರ ಮೂಲಕವೆ ಜಗದೊಡೆಯನೊಡನೆ ಅಭಿರಂಜಿಸಲು ಸಾಧ್ಯ. ಎಲ್ಲ ತಪಸ್ಸು, ಉಪವಾಸ ಮತ್ತು ತೀರ್ಥಯಾತ್ರೆಗಳ ಪುಣ್ಯ ಅದರಲ್ಲಿ ಅಡಗಿದೆ. ಅವರ ಮೂಲಕವೆ ಪರಮಗುರುವನ್ನು ಕಾಣಲು ಸಾಧ್ಯ. ಅವರ ಮೂಲಕವೇ ದೈವಕೃಪೆಯನ್ನು ಗಳಿಸಿ ಮುಕ್ತಿಯನ್ನು ಪಡೆಯಲು ಸಾಧ್ಯ.

(ರಾಮಕಲಿ. ಮೊ. 10)

ಗುರುವಿನ ಮಾರ್ಗದರ್ಶನವನ್ನು ಸ್ವೀಕರಿಸಿದ ಬಳಿಕ ಮನಸ್ಸು ಇತರ ವಿಚಾರಗಳಿಂದ ಮುಕ್ತವಾಗಿ ದೇವನಲ್ಲಿ ಲೀನವಾಗುತ್ತದೆ. (ರಾಮಕಲಿ. ಮೊ 3)

ಗುರು ಸತ್ಯದ ತುಂಡುದಟ್ಟಿಯನ್ನು ಧರಿಸಿರುತ್ತಾನೆ. ಯಾವಾಗಲೂ ಆ ಸರ್ವಾಂತರ್ಯಾಮಿ ಭಗವಂತನಲ್ಲಿಯೇ ಮಗ್ನನಾಗಿರುತ್ತಾನೆ. ಅವನ ನಾಲಗೆ ದೇವವಿಷಯಕ ಪ್ರೇಮಮಂತ್ರವನ್ನೆ ಜಪಿಸುತ್ತಿರುತ್ತದೆ. ಅವನ ಕರ್ಮಗಳಿಂದ ಸುಪ್ರೀತನಾಗುವುದರಿಂದ, ವಿಶ್ವವನ್ನೆ ಸೃಷ್ಟಿಸಿದ ಭಗವಂತ ಆ ನಿಜವಾದ ಗುರುವಿನ ಬಳಿ ಬರುತ್ತಾನೆ. ಸರ್ವವ್ಯಾಪಿಯಾಗಿರುವ, ಸರ್ವಾತ್ಮನಾಗಿರುವ ಭಗವಂತನನ್ನು ಗುರು ನಮಗೆ ತೋರಿಸುತ್ತಾನೆ.

(ರಾಮಕಲೀ. ದಖ್ಣೀ. ಮೊ. 5)

ಗುರುವೆಂಬ ಸಾಗರ ರತ್ನಗಳಿಂದ ತುಂಬಿ ತುಳುಕುತ್ತಿದೆ. ಅಲ್ಲಿ ಸತ್ಯದ ಅಗಾಧ ಮೌಕ್ತಿಕ ಭಂಡಾರವೆ ಇದೆ.

(ರಾಮಕಲೀ. ಮೊ. ದಖ್ಣೀ. ಓಂಕಾರ್. 27)

ಗುರುವಾಣಿ ಮನೋಜ್ಞವಾದುದು. ಅದರ ಚಿಂತನ—ಮನನದಿಂದ ದೇವನನ್ನು ಪಡೆಯಬಹುದು ; ಆಗ ತನ್ನತನ ಇಲ್ಲವಾಗುತ್ತದೆ ; ಆಸೆ ಆಮಿಷಗಳು ಶಾಂತವಾಗುತ್ತವೆ ; ವಧು ತನ್ನ ಪ್ರಿಯಕರನನ್ನು ಸೇರುತ್ತಾಳೆ.

(ರಾಮಕಲೀ. ಮೊ ; ದಖ್ಣೀ ಓಂಕಾರ್. 47)

ನಿಜವಾದ ಗುರುವನ್ನು ಸಂಧಿಸಿದ ಕೂಡಲೇ ಅಂಧಕಾರ ತೊಲಗುತ್ತದೆ. ಅಹಂಕಾರ ದಮನವಾಗುತ್ತದೆ. ದೇವನೊಡನೆ ಐಕ್ಯ ಸಿದ್ಧಿಸುತ್ತದೆ.

(ರಾಮಕಲೀ. ಮೊ. ಸಿದ್ಧಾಂತಗೋಷ್ಠಿ 15)

ಗುರುವಾಣಿಯನ್ನು ಕುರಿತು ಚಿಂತಿಸಿದಾಗ ಅಜ್ಞಾನ ದೂರವಾಗುತ್ತದೆ. ಗುರುವನ್ನು ಸಂಧಿಸಿದಾಗ ಮುಕ್ತಿದ್ವಾರ ಗೋಚರಿಸುತ್ತದೆ.

(ರಾಮ್‌ಕಲಿ. ಮೊ ; ಸಿದ್ಧಾಂತ ಗೋಷ್ಠಿ 56)

ಗುರುವಿನ (ದಾರ್ಶನಿಕ ಪರುಷಮಣಿ) ಭೇಟಿಯಿಂದ ತುಕ್ಕು ಹಿಡಿದ ಕಬ್ಬಿಣವೂ ಚಿನ್ನವಾಗಿ ಪರಿವರ್ತಿತವಾಗುತ್ತದೆ. (ಮರು. ಮೊ. 3)

ನಿಜವಾದ ಗುರು ಅಂಬಿಗ, ಅವನ ಉಪದೇಶ (ದೋಣಿಯ ಹುಟ್ಟು) ನಮ್ಮನ್ನು ಮತ್ತೊಂದು ದಡಕ್ಕೆ ಕೊಂಡೊಯ್ಯುತ್ತದೆ. ಅಲ್ಲಿ ಗಾಳಿಯೂ ಇಲ್ಲ, ಬೆಂಕಿಯೂ ಇಲ್ಲ, ನೀರೂ ಇಲ್ಲ, ಆಕಾರವೂ ಇಲ್ಲ, ಅದೇ ನಮ್ಮ ನಿಜವಾದ ಒಡೆಯನ ನಿವಾಸಸ್ಥಾನ. ನಮ್ಮನ್ನು ಪಾರುಗಾಣಿಸುವ ಒಡೆಯನ ನಿಜನಾಮದ ಪ್ರಣಯನ ಅಲ್ಲಿ ನಡೆಯುತ್ತಿರುತ್ತದೆ. ಗುರು ಕೈ ಹಿಡಿದು ನಡೆಸಿದವರೆಲ್ಲರೂ ಆ ದಡವನ್ನು ತಲುಪಿದರು. ಪರಮ ಪ್ರಭುವಿನೊಡನೆ ಏಕಶ್ರುತಿಯಾದರು. 'ಹುಟ್ಟುಸಾವುಗಳ' ಬಂಧನವನ್ನು ಅವರು ಮೀರಿ ನಿಂತರು. ಆತ್ಮ ಪರಮಾತ್ಮನೊಡನೆ ಲೀನವಾಯಿತು. ಗುರೂಪದೇಶದಿಂದ ಸಮತೆ ವೃದ್ಧಿಸುತ್ತದೆ; ಸತ್ಯದೊಡನೆ ತಾದಾತ್ಮ್ಯವೇರ್ಪಡುತ್ತದೆ. (ಮರು. ಮೊ. 2)

ಗುರು ಸುಧೆಯ ಸರಸ್ಸು. ನಾವು ಅದರ ದಡದಲ್ಲಿರುವ ಹಂಸಗಳು. ಗುರುದೇವ ಸಂಕೀರ್ತನೆ ಮುತ್ತು-ರತ್ನಗಳ, ಹವಳ-ಪಚ್ಚೆಗಳ ಸಾಗರ. ಅದರಿಂದ ನನ್ನ ಮನಶರೀರಗಳೆರಡೂ ಅಭಿರಂಜಿತವಾಗಿವೆ. (ಮರು. ಮೊ. 8)

ಗುರುವಿನ ಅಧೀನದಲ್ಲಿರುವವರು ಮಾಡುವ ಕಾರ್ಯಗಳೆಲ್ಲವೂ ಸತ್ಯ. ಅವರು ಬರುವುದೂ ಇಲ್ಲ, ಹೋಗುವುದೂ ಇಲ್ಲ. ಅವರು ಸಾವಿನ ನಿಯಮಗಳಿಗೆ ಒಳಗಾದವರೂ ಅಲ್ಲ. ಅವರು ಕೊಂಬೆಗಳಿಗಲ್ಲದೆ ಬೇರಿಗೇ ಅಂಟಿಕೊಂಡಿರುತ್ತಾರೆ. ಅವರಲ್ಲಿ ಸತ್ಯದ ತವಕ ಇರುತ್ತದೆ. (ಮರು. ಮೊ. 12)

ಸತ್ಯ ಸಾಕ್ಷಾತ್ಕಾರಕ್ಕೆ ನೆರವಾಗುವ ಅನುಚ್ಚಾರವಾದುದನ್ನು ಉಚ್ಚರಿಸುವಂತೆ ಮಾಡುವ, ಆ ಶಬ್ದದಲ್ಲಿಯೇ ಐಕ್ಯಗೊಳ್ಳುವಂತೆ ಮಾಡುವ ಆ ಗುರು ಒಬ್ಬನನ್ನು ಮಾತ್ರ ನಾನು ನಂಬುತ್ತೇನೆ. (ಧನಶ್ರೀ. ಮೊ.)

ದೇವವಾಣಿಯನ್ನು ಪ್ರಸಾರಮಾಡುವ ಗುರುವಿನಲ್ಲಿಯೇ ದೇವನು ಐಕ್ಯಗೊಂಡಿದ್ದಾನೆ. (ಮಲ್ಹಾರ. ಮೊ)

ನಿಜವಾದ ಗುರು ತನ್ನ ಕೃಪೆಯಿಂದ ನನಗೆ ಈ ಲೋಕವನ್ನೂ ಕೆಳಲೋಕವನ್ನೂ ಆಕಾಶವನ್ನೂ ತೋರಿಸಿದ್ದಾನೆ. ಇಂದಿರುವ, ಎಂದೆಂದೂ ಇರುವ ಆ ಜಗದೊಡೆಯ ಯಾರ ಗರ್ಭದಲ್ಲೂ ಅವತರಿಸಿಲ್ಲ. ನನ್ನ ಹೃದಯದಲ್ಲಿಯೇ ನಾನವನನ್ನು ಕಾಣುತ್ತೇನೆ. (ಸೋರಠಾ. ಮೊ.)

ನಿಜವಾದ ಗುರು ಕೃಪೆದೋರಿದಂದೇ ನಾನವನನ್ನು ಕಾಣುತ್ತೇನೆ. ದಶಸಹಸ್ರ ಜನ್ಮಗಳಲ್ಲಿ ಅಲೆದಾಡುತ್ತಿದ್ದರೂ ಅವನ ಮಾತು ಕಿವಿಯಲ್ಲಿ ಮೊಳಗುತ್ತಿರುತ್ತದೆ. (ಆಸ. ಮೊ.)

ಗುರುವಿಲ್ಲದೆ ದೈವಶ್ರದ್ಧೆಯಾಗಲೀ, ದೈವಪ್ರೇಮವಾಗಲೀ ವರ್ಧಿಸುವುದಿಲ್ಲ; ಸಂತಸಮಾಜದಲ್ಲಿಯೂ ನಮಗೆ ಎಡೆ ದೊರೆಯುವುದಿಲ್ಲ. ಗುರುವಿಲ್ಲದೆ ನಾವು ಕುರುಡರಾಗುತ್ತೇವೆ; ತುಮುಲಕ್ಕೊಳಗಾಗುತ್ತೇವೆ. ಗುರುವಿನಿಂದಲೇ ಮನಸ್ಸು ಪಾವನವಾಗುತ್ತದೆ; (ಗುರುವಿನ) ಉಪದೇಶದಿಂದಲೇ ಮನಸ್ಸು ನಿರ್ಮಲವಾಗುತ್ತದೆ. ಗುರುಸಾನ್ನಿಧ್ಯದಿಂದಲೇ ಸ್ವಾರ್ಥವನ್ನು ಗೆಲ್ಲಲ್ಲು ಸಾಧ್ಯವಾಗುತ್ತದೆ. ದೈವಶ್ರದ್ಧೆಯ ಯೋಗದಲ್ಲಿ ಶಾಶ್ವತವಾಗಿ ರಮಿಸುವುದು ಸಾಧ್ಯವಾಗುತ್ತದೆ. ಸಂತ ಗುರುವಿನ ಸಂಪರ್ಕದಿಂದಲೇ ಎಲ್ಲ ವಿಕಾರಗಳೂ ದೂರವಾಗುತ್ತವೆ. "ಈ ರೀತಿ (ಗುರುವಿನ ಮೂಲಕ) ಸಮಸ್ಥಿತಿ ಯೋಗದ ಪರಮಾನಂದ ಲಭ್ಯವಾಗುತ್ತದೆ" ಎಂದು ನಾನಕ್ ಹೇಳಿದ್ದಾನೆ.

(ಬಸಂತ. ಮೊ. 6)

ಗುರುವನ್ನು ಭೇಟಿಯಾದಾಗ ಬುದ್ಧಿ ಉದಾತ್ತವಾಗುತ್ತದೆ, ಮನಸ್ಸು ನಿರ್ಮಲವಾಗುತ್ತದೆ, ಅಹಂಕಾರ ದೂರವಾಗುತ್ತದೆ. (ಬಸಂತ. ಮೊ. 2)

ಅವನೊಡನೆ ಎಲ್ಲರನ್ನೂ ಒಂದುಗೂಡಿಸುವವನೇ ನಿಜವಾದ ಗುರು.

(ಶ್ರೀರಾಗ. ಮೊ.)

## ಒಳಿತು-ಕೆಡುಕು

ದೇವರ ಸನ್ನಿಧಿಯಲ್ಲಿ ಒಳ್ಳೆಯವರೆಂದು ನಿರ್ಣೀತರಾದವರೆ ಒಳ್ಳೆಯವರು.

(ಶ್ರೀರಾಗ. ಮೊ. 4-4)

ಎಲೈ ಸ್ನೇಹಿತನೆ, ಮನಸ್ಸಿನಲ್ಲಿ ಕೆಟ್ಟದ್ದನ್ನು ತುಂಬುವ ಮತ್ತು ಶರೀರ ನೋವಿನಿಂದ ನುಲಿಯುವಂತೆ ಮಾಡುವ ಆಹಾರಾಮೋದಗಳೆಲ್ಲ ನಿರರ್ಥಕ.
(ಶ್ರೀರಾಗ. ಮೊ. 2-7)

ದೇವರ ವಿಶ್ವಾಸ ಎಷ್ಟು ಅಪಾರವೆಂಬುದನ್ನರಿತಾಗ ನನ್ನಲ್ಲಿದ್ದ ದುರ್ಗುಣಗಳೂ ಸದ್ಗುಣಗಳಾಗಿ ಬದಲಾವಣೆಗೊಂಡುವು. (ಶ್ರೀರಾಗ. ಮೊ. 11)

ನೆಲ ಉತ್ತು, ಹದಮಾಡಿದ ಮೇಲೆಯೇ ಬೀಜ ಬಿತ್ತಬೇಕೆಂಬುದು ನಿಜವಾದ ಮತ್ತು ಬುದ್ಧಿವಂತನಾದ ಬೇಸಾಯಗಾರನಿಗೆ ಗೊತ್ತು.
(ಶ್ರೀರಾಗ. ಮೊ. 2-13)

ಸ್ವಾರ್ಥಪರರಿಗೆ ಎಂದೂ ಶಾಂತಿ ದೊರೆಯುವುದಿಲ್ಲ. ಭಗವನ್ಮುಖಿಗಳಾದವರು ಅವನ ಲೀಲೆಯಲ್ಲಿಯೇ ನಿಮಗ್ನರಾಗಿರುತ್ತಾರೆ.
(ಶ್ರೀರಾಗ. ಮೊ. 3-19)

ಮಾನವನ ಆತ್ಮ ಪರಮಾತ್ಮದೊಡನೆ ಒಂದುಗೂಡಿದಾಗ, ಅವನ ಮನಸ್ಸು ಗುರುವಿನ ಉದಾತ್ತ ಮನಸ್ಸಿನೊಡನೆ ಸಮತಾಳವಾಗಿ ಮಿಡಿಯ ತೊಡಗಿದಾಗ, ಹಿಂಸಾಭಾವನೆ, ಅಹಂಕಾರ, ಮತ್ತು ಮನಸ್ಸಿನ ತೊಳಲಾಟಗಳೆಲ್ಲ ತೊಲಗಿಹೋಗುತ್ತವೆ; ಅಂತೆಯೇ ನಮ್ಮ ಸಂದೇಹಗಳೂ, ದುಃಖಗಳೂ ಇಲ್ಲವಾಗುತ್ತವೆ. (ಶ್ರೀರಾಗ. ಮೊ. 2-20)

ಸತ್ಕಾರ್ಯಗಳೇ ನಿನ್ನ ಹೊಲವಾಗಿ, ದೇವವಾಣಿಯೇ ಬೀಜವಾಗಿ, ಸತ್ಯವೇ ನೀರಾದರೆ ಶ್ರದ್ಧೆಯ ಫಸಲು ಬೆಳೆಯುತ್ತದೆ. ಹೀಗೆ ನಿನಗೆ ಸ್ವರ್ಗ-ನರಕಗಳ ಅರಿವುಂಟಾಗುತ್ತದೆ. (ಶ್ರೀರಾಗ. ಮೊ. 1-27)

ಪಾಪದ ಕೆಸರು ನಿನಗೆ ಮೆತ್ತಿಕೊಂಡಿದೆ. ಕಮಲ (ದೇವರು) ದೊಂದಿಗೆ ತಾನು ಬಾಳುತ್ತಿದ್ದೇನೆಂಬ ಅರಿವಿಲ್ಲದ ಕಪ್ಪೆಯಂತೆ ನೀನು ವರ್ತಿಸುತ್ತಿದ್ದೀಯೆ. ಆ ದುಂಬಿ ನಿನಗೆ (ಪ್ರೇಮದ) ಪಾಠವನ್ನು ಕಲಿಸುತ್ತದೆ. ಆದರೆ ಅದು ನಿನಗೆ ಅರ್ಥವಾಗುತ್ತಿಲ್ಲ. (ಶ್ರೀರಾಗ. ಮೊ. 2-27)

ನಾನು ಹೆಚ್ಚು ಬುದ್ಧಿವಂತನಾದಷ್ಟೂ, ಹೆಚ್ಚು ಹೊರೆ ಹೊರುತ್ತೇನೆ.
(ಶ್ರೀರಾಗ. ಮೊ. 3-29)

ಸತ್ಕರ್ಮವಿದ್ದೆಡೆ ಪರಿಶುದ್ಧ ಮನಸ್ಸಿರುತ್ತದೆ (ಶ್ರೀರಾಗ. ಮೊ. 3-30)

ನಾವೆಲ್ಲ ಅವನು ನೀರೆರೆದು ಬೆಳೆಸಿದ ಸಸ್ಯಗಳು. ಲೋಕವೇ ಅವನ ತೋಟ. ಫಲಾನುಗುಣವಾಗಿ ಅವನು ಗಿಡಗಳಿಗೆ ಹೆಸರಿಡುತ್ತಾನೆ.
(ಶ್ರೀರಾಗ. ಮೊ. 2-32)

ಮನಸ್ಸು ಹರಿದಂತೆ ಮನುಷ್ಯ ವರ್ತಿಸುತ್ತಾನೆ. ಅಂತೆಯೇ ತನ್ನ ವಿಧಿಗನುಗುಣವಾಗಿ ಫಲಾಫಲಗಳನ್ನು ಪಡೆಯುತ್ತಾನೆ; ಬಿತ್ತಿದ್ದನ್ನು ಕೊಯ್ಯುತ್ತಾನೆ. (ಶ್ರೀರಾಗ. ಮೊ. 2-32)

ತನ್ನ ದಯಾಗುಣದಿಂದಾಗಿ ದೇವರು ನಮಗೆ ಕೃಪೆದೋರುತ್ತಾನೆ. ನಮ್ಮ ಕರ್ಮಕ್ಕೆ ತಕ್ಕ ಫಲ ಅನುಗ್ರಹಿಸುತ್ತಾನೆ.(ಶ್ರೀರಾಗ. ಮೊ. ಅಷ್ಟಪದಿಗಳ. 3.11)

ಎಲೈ ದೇವನೆ, ನಿನ್ನೊಲುಮೆಗೆ ಪಾತ್ರರಾದವರೆಲ್ಲ ಒಳ್ಳೆಯವರು. ಸ್ವಭಾವತಃ ಯಾರೂ ಒಳ್ಳೆಯವರಲ್ಲ; ಯಾರೂ ಕೆಟ್ಟವರಲ್ಲ.
(ಶ್ರೀರಾಗ. ಮೊ; ಅಷ್ಟಪದಿಗಳು. 3-11)

ಶ್ರದ್ಧೆ ಮತ್ತು ತೃಪ್ತಿಗಳೇ ದೇವಸಂಭೂತಿಗಳ ಆಹಾರ.
(ಶ್ರೀರಾಗ. ವರ್‌ಶ್ಲೋಕ. ಮೊ.)

ತಾಳಗಳಂತೆ ಹಾಗೂ ಕಾಲಗೆಜ್ಜೆಗಳಂತೆ ಹೃದಯದ ಬಯಕೆಗಳು ಬೊಬ್ಬೆ ಹಾಕುತ್ತಿವೆ. ಲೋಕದ ನಗಾರಿಯೂ ಅವುಗಳಿಗೆ ತಕ್ಕಂತೆ ನಿನದಿಸುತ್ತಿದೆ. ಕಲಿಯುಗದ ತಾಳಮೇಳಕ್ಕೆ ತಕ್ಕಂತೆ ಮನಸ್ಸು ಹುಚ್ಚೆದ್ದು ಕುಣಿಯುತ್ತಿದೆ. ಸಂಯಮಿಗಳೆಲ್ಲಿ ತಮ್ಮ ಹೆಜ್ಜೆಯನ್ನೂರಬೇಕೋ ಅರಿಯೆ? (ಅಸ. ಮೊ. 1-4)

ನಿಮ್ಮಲ್ಲಿ ಪ್ರತಿಯೊಬ್ಬರೂ ಅಂತರ್ಯದಲ್ಲಿ ಬೆಳಗುತ್ತಿರುವ ಜ್ಯೋತಿಯನ್ನು ನೋಡಿ ಅವನ ಜಾತಿಯನ್ನು ಕೇಳಬೇಡಿ. ಏಕೆಂದರೆ ಅಲ್ಲಿ (ಪರದಲ್ಲಿ) ಜಾತಿಗೆ ಯಾವ ಗಣನೆಯೂ ಇಲ್ಲ. (ಅಸ. ಮೊ. 2-3)

ಇತರರಿಗೆ ಒಳ್ಳೆಯದಾಗಬೇಕೆಂದು ಬಯಸುವಲ್ಲಿ, ತಾನು ಒಳ್ಳೆಯದನ್ನು ಮಾಡುವಾಗಲೂ ವಿನಯವಾಗಿ ನಡೆದುಕೊಳ್ಳಬೇಕು.
(ಅಸ. ಮೊ. ಪೌರಿ, 5)

ಪ್ರತಿಫಲಾಪೇಕ್ಷೆಯಿಂದ ಮುಕ್ತಿಯನ್ನು ಬಯಸುವುದಾದರೆ ಧರ್ಮಾಚರಣೆಯೂ ತನ್ನ ಮೌಲ್ಯವನ್ನು ಕಳೆದುಕೊಳ್ಳುತ್ತದೆ. (ಅದೇ)

ನಮ್ಮ ಸಣ್ಣತನದಿಂದಾಗಿ ನಾವು ಸೇವೆಯ ಪುಣ್ಯವನ್ನು ಕಳೆದುಕೊಳ್ಳುತ್ತೇವೆ. (ಆಸ, ಮೊ. ವರ್)

ಯಾರನ್ನೂ ಕೆಟ್ಟವನೆಂದು ಕರೆಯಬೇಡ: ಇದೇ ಅರಿವಿನ ಸಾರ. ಮೂರ್ಖನೊಡನೆ ವಾದಿಸಬೇಡ. (ಅದೇ)

ನಾಲಗೆ ಹರಿತವಾಗಿದ್ದರೆ ಶರೀರ ಮತ್ತು ಮನಸ್ಸುಗಳೆರಡೂ ನಿಸ್ಸತ್ವವಾಗುತ್ತವೆ. ನಿಜಸನ್ನಿಧಿಯಲ್ಲಿ ಕೆಟ್ಟನಾಲಗೆಯವನು ತಾತ್ಸಾರಕ್ಕೆ ಗುರಿಯಾಗುತ್ತಾನೆ. ಎಲ್ಲರೂ ಅವನ ಮುಖಕ್ಕೆ ಉಗಿಯುತ್ತಾರೆ. (ಅದೇ)

ಪರವಸ್ತುವಿನೊಡನೆ ನಮ್ಮನ್ನು ಬಂಧಿಸುವ ಆ ಪ್ರೇಮ ಯಾವ ರೀತಿಯದು? ಅವನ ಪ್ರೇಮದಲ್ಲಿ ಯಾರು ಸಂಪೂರ್ಣವಾಗಿ ಲೀನವಾಗುತ್ತಾನೆಯೋ ಅವನೇ ನಿಜವಾದ ಪ್ರೇಮಿ. ತನಗೆ ಒಳ್ಳೆಯದನ್ನು ಮಾಡಿದಾಗ ಮಾತ್ರ ಒಳ್ಳೆಯವನಾಗಿ ವರ್ತಿಸಿ, ತನಗೆ ಕೆಡಕುಂಟಾದಾಗ ತಾನೂ ಕೆಟ್ಟವನಾಗಿ ವರ್ತಿಸುವವನು ಪ್ರೇಮಿಯಲ್ಲ. ಏಕೆಂದರೆ, ಅಂಥ ವರ್ತನೆ ಪ್ರೇಮದ ವ್ಯಾಪಾರವಾಗುತ್ತದೆ. (ಅದೇ)

ಒಡೆಯನಿಗೆ ಒಂದೆಡೆ ನಮಸ್ಕರಿಸುವ, ಮತ್ತೊಂದೆಡೆ ಅವಿಧೇಯನಾಗಿರುವ ವ್ಯಕ್ತಿಯನ್ನು ಒಡೆಯ ಬುಡಸಹಿತ ಕಿತ್ತೊಗೆಯುತ್ತಾನೆ. ಏಕೆಂದರೆ, ಅವನ ಈ ಎರಡು ವರ್ತನೆಗಳೂ ಮಿಥ್ಯೆ; ಒಡೆಯನಿಗೆ ಅವು ಲೆಕ್ಕಕ್ಕಿಲ್ಲ. (ಅದೇ)

ಮೂರ್ಖರೊಡನೆ ಸ್ನೇಹವೂ, ಅಹಂಕಾರಿಗಳೊಡನೆ ಪ್ರೇಮವೂ ನೀರಿನ ಮೇಲೆ ಗೆರೆಯೆಳೆದಂತೆ; ಅದರ ಕುರುಹಾಗಲೀ ಗುರುತಾಗಲೀ ಉಳಿದಿರುವುದಿಲ್ಲ. (ಅದೇ)

ಪಿಶುನವಚನವನ್ನು ಕೇಳುವ ಕಿವಿಗಳೆ ಹೊಲೆ, ಮತ್ತೊಬ್ಬನ ಆಸ್ತಿಯನ್ನು ತುಡುಕುವ ಕೈಗಳೇ ಹೊಲೆ; ಪರಸ್ತ್ರೀಸೌಂದರ್ಯವನ್ನು ಲೋಭದಿಂದ ನೋಡುವ ಕಣ್ಣುಗಳೇ ಹೊಲೆ; ದೈವತವಲ್ಲದ್ದನ್ನು ಸವಿಯುವ ನಾಲಗೆಯೇ ಹೊಲೆ; ಅನ್ಯದೈವಕ್ಕೆರಗುವ ಮನವೇ ಹೊಲೆ; ಮತ್ತೊಬ್ಬರಿಗೆ ಒಳಿ

ತನ್ನುಂಟುಮಾಡದ ಮೈಯೇ ಹೊಲೆ; ಹೊಲೆತನದಿಂದ ಹೊರಸೂಸುವ ವಾಸನೆಯೂ ಹೊಲೆಯೆ. (ಅದೇ)

ಬೊಜ್ಜನ್ನು ಮಾತ್ರ ಬೆಳೆಸುವ ಬದುಕಿಗೆ ಧಿಕ್ಕಾರ.

(ರಾಗ ಸುಹಿ. ವರ್ ಶ್ಲೋಕ. ಮೊ)

ಡಂಭಾಚಾರಿಗಳು ಗೌರವಕ್ಕೂ ಪಾತ್ರರಲ್ಲ; ಹೆಸರೂ ಗಳಿಸುವವರಲ್ಲ. ಅವರು ಯಾವಾಗಲೂ ಕೊಳಕಾಗಿರುವ ಕಪ್ಪು ಕಾಗೆಯಂತೆ ಅಥವಾ ಪಂಜರದೊಳಗಣ ಪಕ್ಷಿಯಂತೆ ಇರುತ್ತಾರೆ. ಸರಳಿನ ಹಿಂಬದಿಯಲ್ಲಿ ಅದು ರೆಕ್ಕೆ ಬಡಿಯಬಹುದಾದರೂ, ಅದಕ್ಕೆ ಬಿಡುಗಡೆ ಎಂಬುದಿಲ್ಲ.

(ಬಿಲವಲ್. ಮೊ. ಥಿಟ್ರಿ)

ಮನಸ್ಸಿನಲ್ಲಿ ಆಮಿಷವನ್ನಾಗಲೀ ಸ್ವಾತ್ಮತೆಯನ್ನಾಗಲೀ ಸ್ತ್ರೀಮೋಹವನ್ನಾಗಲೀ ಹೊಂದಿರುವವನು ಇಲ್ಲಿ ಸಲ್ಲುವುದಿಲ್ಲ; ಅಲ್ಲಿಯೂ ಸಲ್ಲುವುದಿಲ್ಲ.

(ರಾಮಕಲೀ. ಮೊ. 2)

ಕಾಮ ಕ್ರೋಧಗಳೇ ಎರಡು ಫಸಲುಗಳು. ಹಗಲು-ರಾತ್ರಿಗಳೇ ಋತುಗಳು. ಈ (ಶರೀರ) ಕ್ಷೇತ್ರಕ್ಕೆ ನಾವು ದುರಾಶೆಯ ನೀರು ಹಾಯಿಸುತ್ತೇವೆ; ಭ್ರಮೆಯ ಬೀಜಗಳನ್ನು ಬಿತ್ತುತ್ತೇವೆ; ನಮ್ಮ ಆಸೆಯೇ ಆ ನೆಲವನ್ನುಳುತ್ತದೆ. ದುರುದ್ದೇಶವೇ ನೇಗಿಲು; ಪಾಪವೇ ಫಸಲು. ದೈವಸಂಕಲ್ಪದಿಂದ ನಾವು ಸಂಪಾದಿಸುವುದು ಇದೇ. ಲೆಕ್ಕವನ್ನೊಪ್ಪಿಸೆಂದಾಗ (ಕರ್ಮಗಳ) ಗರ್ಭ ಬಂಜೆಯಾಗಿದೆಯೆಂದು ಘೋಷಿಸುತ್ತೇವೆ.

(ಶ್ಲೋಕ ಮೊ. ವರ್. ರಾಮಕಲೀ. ಮೊ 3)

ಒಲವು ಹೊಲನಾಗಲಿ, ಶೌಚ ನೀರಾಗಲಿ, ಸತ್ಯತೃಪ್ತಿಗಳು ಎತ್ತಾಗಲಿ; ವಿನಯ ನೇಗಿಲಾಗಲಿ, ಆತ್ಮಪ್ರಜ್ಞೆ ಉಳುಗಾರನಾಗಲೀ, ದೈವಧ್ಯಾನ ಎರೆಮಣ್ಣಾಗಲಿ, ಶಿವೈಕ್ಯ ಋತುವಾಗಲಿ; ಭಗವನ್ನಾಮ ಬೀಜವಾಗಲಿ, ದೈವಾನುಗ್ರಹ ಫಸಲಾಗಲಿ; ಅದರ ಮುಂದೆ ಇಡೀ ಲೋಕ ಮಾಯೆಯಂತೆ ಕಾಣುತ್ತದೆ; ಎಲೈ ನಾನಕ್, ಪರಮಾತ್ಮ ಕೃಪೆಯಿಂದ ಅಂಥ ಕರ್ಮವಂತ ಭಗವಂತನಿಂದ ಅಗಲುವುದಿಲ್ಲ.

(ಶ್ಲೋಕ. ಮೊ. ವರ್ ರಾಮಕಲೀ ಮೊ 3)

ದೈವಸಂಕಲ್ಪಕ್ಕೆ ನೀನು ಸವಾಲು ಹಾಕಿದರೆ ಪ್ರೇಮಕ್ಕೆ ಭಂಗ ಬರುತ್ತದೆ. ತೋಳು ಹಿಡಿದು ಅತ್ತಿತ್ತ ಎಳೆದಾಡಿದರೆ ಮುರಿಯುತ್ತದೆ. ನಿನ್ನ ನುಡಿ ಕಟು ವಾಗಿದ್ದರೂ ಪ್ರೇಮಕ್ಕೆ ಭಂಗ ಬರುತ್ತದೆ. ಏಕೆಂದರೆ ದುರುದ್ದೇಶವುಳ್ಳ ವಧು ವನ್ನು ನಿನ್ನ ದೇವರು ಕೈಬಿಡುತ್ತಾನೆ.

(ರಾಮಕಲೀ. ಮೊ. ದಖನಿ ಓಂಕಾರ್ 28)

ನಮ್ಮ ಕರ್ಮಗಳೇ ಪುಸ್ತಕ. ಮನಸ್ಸು (ಕಾಮದ) ಶಾಯಿಯಿಂದ ಅದನ್ನು ಬರೆಯುತ್ತದೆ. ಬರವಣಿಗೆ ಎರಡು ವಿಧ: ಒಳ್ಳೆಯದು ಮತ್ತು ಕೆಟ್ಟದ್ದು. ಅಭ್ಯಾಸಬಲ ಪ್ರಚೋದಿಸಿದಂತೆ ನಾವು ನಡೆಯುತ್ತೇವೆ. ಆದರೆ ದೇವರು ಅನಂತ ಗುಣಸಾಗರ (ಅವುಗಳಿಂದ ಮನಸ್ಸನ್ನು ನಿಗ್ರಹಿಸಬಹುದು)

(ಮರು. ಮೊ)

ಲೋಭವೇ ನಾಯಿ, ಮಿಥ್ಯೆಯೇ ಜಲಗಾರ, ವಂಚನೆಯೇ ಹೆಣದಿನಿ; ಚಾಡಿಯೇ ನನ್ನ ನಾಲಿಗೆ ನೆಕ್ಕುವ ಕೊಳೆ. ಚಂಡಾಲನಂತೆ ನನ್ನನ್ನು ಸುಡುವ ಕೋಪವೇ ಬೆಂಕಿ. (ಶ್ರೀರಾಗ. ಮೊ 4.4)

ದೈವಾನುಗ್ರಹಕ್ಕೆ ಪಾತ್ರನಾದವನಿಂದ ಲೋಭ ದೂರ ಸರಿಯುತ್ತದೆ; ಮೋಹ, ದ್ವೇಷ, ಅಹಂಕಾರ, ಹೋರಾಟ, ಕ್ರೋಧ ಮಾಯಾನುರಾಗಗಳೆಲ್ಲ ಅವರನ್ನು ಬಿಟ್ಟು ತೊಲಗುತ್ತವೆ. (ಶ್ರೀರಾಗ. ಮೊ 3:14)

ಯಾರ ಮುಖಕ್ಕೆ ಪಾಪದ ಕಳಂಕ ಹತ್ತಿದೆಯೋ ಅವರಿಗೆ ದೇವರ ಸನ್ನಿಧಿಯಲ್ಲಿ ಆಸರೆ ದೊರೆಯುವುದಿಲ್ಲ. (ಧನಶ್ರೀ. ಮೊ. 5)

ಕಬ್ಬಿಣವನ್ನು ಕುಲುಮೆಯಲ್ಲಿ ಕರಗಿಸಿ, ಮತ್ತೆ ಎರಕಹುಯ್ಯುವಂತೆ ಪಾಪಿ ಮತ್ತೆ ಮತ್ತೆ ಹುಟ್ಟಬೇಕಾಗುತ್ತದೆ. (ಸುಹೀ. ಮೊ 4)

## ದುಃಖ ಮತ್ತು ಸುಖ

ದುಃಖವೆಂಬುದು ನಿವಾರಣೆ, ಸುಖವೆಂಬುದು ವ್ಯಾಧಿ; ಏಕೆಂದರೆ, ಓ ದೇವನೇ, ಸುಖವಿದ್ದಲ್ಲಿ ನೀನಿರುವುದಿಲ್ಲ. (ಅಸ. ಮೊ. ವರ್. ಶ್ಲೋಕ. ಮೊ)

ದೈವಸಂಕಲ್ಪದಲ್ಲಿ ನೆಲೆಗೊಳ್ಳುವವನು ಮತ್ತು ಸುಖದುಃಖಗಳನ್ನು ಸಮಭಾವದಿಂದ ನೋಡುವವನೇ ಜ್ಞಾನಿ. (ಅದೆ)

ಆರ್ತನು ಭಗವಂತನ ಬಾಗಿಲಲ್ಲಿ ನಿಂತು ಕೂಗಿ ಬೇಡಿದರೆ, ಭಗವಂತ ಅವನಿಗೆ ಕಿವಿಗೊಡುತ್ತಾನೆ; ಅವನು ಹರಸಲಿ ಅಥವಾ ಶಪಿಸಲಿ, ಆರ್ತ ಅವನ ವೈಭವದಲ್ಲಿ ನಲಿಯಬೇಕು. (ಅಸ. ಮೊ. 1:3)

ತಿಳಿಯಾದ ನೀಲಿಜಲದಲ್ಲಿ ತಾವರೆ ಮೊಳೆಯುತ್ತದೆ, ಹಾಗೆಯೆ ಅಜ್ಞಾನದ ಪರೆ ಕೂಡ. ತಾವರೆ ಎರಡರೊಡನೆಯೂ ಬದುಕುತ್ತದೆ, ಆದರೆ ಎರಡರಿಂದಲೂ ನಿರ್ಲಿಪ್ತವಾಗಿರುತ್ತದೆ. ಆದರೆ ಕಪ್ಪೆ ಅಜ್ಞಾನಿಯಾಗಿದ್ದು ಕಸವನ್ನಷ್ಟೆ ತಿನ್ನುತ್ತದೆ. ಅದು ಸದಾ ನೀರಿನಲ್ಲಿ ವಾಸಿಸುತ್ತದೆ; ಆದರೆ ತಾವರೆಯ ಕೀರ್ತಿಯನ್ನಾಲಿಸುತ್ತ ಅದರ ವಿಷಯದಿಂದ ತುಂಬಿಹೋಗಿರುವ ದುಂಬಿಯಂತೆ ಅಥವಾ ಸಹಜ ಪ್ರೇರಣೆಯಿಂದ ಎಚ್ಚರವಾಗಿದ್ದು ದೂರದಲ್ಲಿ ಚಂದ್ರನನ್ನು ಕಂಡೊಡನೆಯೆ ಪ್ರಾರ್ಥನೆಯಲ್ಲಿ ತಲೆಮಣಿಯುವ ಕಾಮಿನಾ ಹೂವಿನಂತೆ ಅದು ಪ್ರೇಮವನ್ನರಿಯದು. ಅಮೃತ ಮಧುರವಾದ ಕ್ಷೀರದಲ್ಲಿ ಮಧು ಮತ್ತು ಸಕ್ಕರೆ ಕೂಡ ನಿಕ್ಷಿಪ್ತವಾಗಿವೆ; ಆದರೆ ಉಣ್ಣೆಹುಳು ಅದನ್ನು ಸವಿಯದೆ ನೆತ್ತರನ್ನಷ್ಟೆ ಹೀರುತ್ತದೆ! (ಮರು. ಮೊ)

ನಾವು ಮನವನ್ನು ಮೆಚ್ಚಿಸಲೋಸುಗ ಹಲವಾರು ಬಗೆಯ ಆಮೋದಗಳನ್ನನುಭವಿಸುತ್ತೇವೆ; ಆದರೆ ನಮ್ಮ ಸಂಪತ್ತನ್ನು ಇತರರು ಕಸಿದುಕೊಳ್ಳುತ್ತಾರೆ. ನಮ್ಮ ದೇಹ ಮಣ್ಣಿಗೆ ಹಿಂದಿರುಗುತ್ತದೆ. ನಮ್ಮೆಲ್ಲ ಒಡವೆಗಳೂ ಕಡೆಗೆ ದೂಳಾಗುತ್ತವೆ; ದಿವ್ಯವಾಣಿಯಿಲ್ಲದೆ ಮನದ ಮಣ್ಣು ಶುದ್ಧಿಗೊಳ್ಳದು. (ಬಿಲವಲ್. ಮೊ)

ಸುಖದುಃಖಗಳನ್ನು ಸಮಭಾವದಿಂದ ನೋಡುವವನು ಗುರುಕೃಪೆಯಿಂದ ಮೃತ್ಯುವನ್ನನುಭವಿಸುವುದಿಲ್ಲ. (ರಾಮಕಲಿ. ಮೊ. ಸಿದ್ಧಗೋಷ್ಠಿ, 61)

ಅಗಲಿಕೆಯ, ಹಸಿವಿನ, ರೋಗದ ಮತ್ತು ಸಾವಿನ ದುಃಖವುಂಟು. ಎಲೈ ವೈದ್ಯನೇ, ಈ ವ್ಯಾಧಿಗಳಲ್ಲಿ ಯಾವುದನ್ನು ನೀನು ಗುಣಪಡಿಸುವೆ? ಜನ ದೇವರನ್ನು ಮರೆತು ಭೋಗನಿಮಗ್ನರಾಗಿ, ದುಃಖಿಗಳಾಗುತ್ತಾರೆ. ಆದರೆ

ಶುದ್ಧವಾದ ದೇಹದಲ್ಲಿ ಶುದ್ಧವಾದ ಆತ್ಮಹಂಸವಿರುತ್ತದೆ; ಅದರಲ್ಲಿ ಭಗವಂತನ ವಿಶೇಷಣಗಳ ಸಾರವಾದ ನಾಮವಿರುತ್ತದೆ. ವ್ಯಕ್ತಿ ಎಲ್ಲ ವ್ಯಾಧಿಗಳನ್ನೂ ಕೊಡವಿ ಮುಕ್ತನಾಗುವುದು ಸತ್ಯನಾಮದ ಮೂಲಕವೇ.
(ಮಲ್ಹಾರ್. ಮೊ)

ನಾನಕ್ : ಇಡೀ ಪ್ರಪಂಚ ದುಃಖದಲ್ಲಿದೆ. (ರಾಮಕಲಿ. ಮೊ. ವರ್)

ದೇವರನ್ನು ಮರೆತು ಭೋಗಗಳಲ್ಲಿ ಮುಳುಗಿರುವವನು ಮಾತ್ರವೇ ದುಃಖಿ.
(ಮಲ್ಹಾರ್. ಮೊ)

## ಸದಾಚರಣೆ

ಸತ್ಯವೊಂದೇ ನಮ್ಮನ್ನು ಕಾಪಾಡತಕ್ಕದ್ದು, ಸತ್ಯವೊಂದೇ.
(ಆಸ. ಮೊ. 4:2)

ನಾವು ನಮ್ಮ ದೇಹವನ್ನು ಸ್ತ್ರೀಯಂತೆ ನಮ್ಮ ಪ್ರಭುವಿಗೊಪ್ಪಿಸಿದಲ್ಲಿ, ಅವನದನ್ನು ಅನುಭವಿಸುತ್ತಾನೆ. (ಶ್ರೀರಾಗ. ಮೊ. 3:20)

ನಿನ್ನ ದೇಹವೇ ಕ್ಷೇತ್ರ, ನಿನ್ನ ಕರ್ಮಗಳೇ ಬೀಜ; ಅದು ಜಗತ್ತನ್ನೆಲ್ಲ ವಶಮಾಡಿಕೊಂಡಿರುವ ದೇವನ ಹೆಸರಿನಿಂದ ನೀರುಗೊಳ್ಳುತ್ತದೆ. ಮನಸ್ಸೇ ಕೃಷಿಕ; ನಿನ್ನ ಆತ್ಮದಲ್ಲಿ ಗಿಡ ಹುಟ್ಟಿದಾಗ, ನೀನು ನಿರ್ವಾಣಸ್ಥಿತಿಯನ್ನು ಪಡೆಯುವೆ. (ಶ್ರೀರಾಗ. ಮೊ. 1:26)

ದೈವಸಂಕಲ್ಪದಂತೆ ಬದುಕುವವನನ್ನು ಮಹಾವಂಚಕಶಕ್ತಿಯಾದ ಮಾಯೆ ವಂಚಿಸದು. ಅಥವಾ ಅಹಂಕಾರದ ಚೂರಿ ಇರಿಯದು
(ಶ್ರೀರಾಗ. ಮೊ. 1:33)

ಪವಿತ್ರ ಗ್ರಂಥಗಳಿಂದ ಸಂಗ್ರಹಿಸಿದ ಜ್ಞಾನದ ಎಣ್ಣೆಯನ್ನು ಮನಸ್ಸಿನ ದೀಪಕ್ಕೆ ಎರೆದುಕೊ. ಭಗವಂತನ ಭಯವೆ ಬತ್ತಿಯಾಗಲಿ, ಅದನ್ನು ಸತ್ಯದ ಜ್ಯೋತಿಯಿಂದ ಹೊತ್ತಿಸಿಕೊ. ಹೀಗೆ ನಿನ್ನ ದೀಪ ಹೊತ್ತುತ್ತದೆ ಮತ್ತು ಪ್ರಭುವನ್ನು ನೀನು ಸಂಧಿಸುತ್ತೀಯೆ. (ಶ್ರೀರಾಗ. ಮೊ. 2:33)

ಲೋಕದಲ್ಲಿ ನಿನ್ನನ್ನು ಸೇವೆಗೆ ಸಮರ್ಪಿಸಿಕೊ; ಭಗವಂತನ ಆಸ್ಥಾನದಲ್ಲಿ ನಿನಗೆ ಗೌರವದ ಸ್ಥಾನ ಸಿಗುತ್ತದೆ. (ಶ್ರೀರಾಗ. ಮೊ)

ಗುರುವಚನವೆ ವಧುವಿನ ಶೃಂಗಾರ; ಅವಳು ಹಾಗೆ ಅಲಂಕೃತಳಾಗಿ ತನ್ನ ಪ್ರಭುವಿಗೆ ಶರಣಾಗತಳಾಗುತ್ತಾಳೆ. ಆಕೆ ಕೈಜೋಡಿಸಿ ಅವನಿಗಾಗಿ ಕಾಯುತ್ತ ನಿಲ್ಲುತ್ತಾಳೆ ಮತ್ತು ತನ್ನೆಲ್ಲ ಪ್ರಾಮಾಣಿಕತೆಯಿಂದ ಪ್ರಾರ್ಥಿಸುತ್ತಾಳೆ. ಅವನ ಪ್ರೇಮದಿಂದ ತುಂಬಿದವಳಾಗಿ, ರಕ್ತವಧೂ ವೇಷಾಲಂಕೃತೆಯಾಗಿ ಮತ್ತು ಭಗವಂತನ ಭಯದಲ್ಲಿ ಬದುಕುವವಳಾಗಿರುತ್ತಾಳೆ, ನಿಜಸ್ವರೂಪದ ವಧು. (ಶ್ರೀರಾಗ. ಮೊ. ಅಷ್ಟಪದಿ 2:2)

ತನ್ನ ಸ್ವಾಮಿಯ ತೆಕ್ಕೆಯಲ್ಲಿ ಹಾಯಾಗಿ ನಿದ್ದೆ ಹೋಗುವವಳೇ ನಿಜವಾದ ವಧು. (ಶ್ರೀರಾಗ. ಮೊ. ಅಷ್ಟಪದಿ 8:2)

ನನ್ನ ವಿನಾ ಮತ್ತೆಲ್ಲರಿಗೂ ಅರ್ಹತೆಯಿದೆ, ಸೌಂದರ್ಯವೂ ಇದೆ; ಆದರೆ ನಾನು ನನ್ನ ಭಗವಂತನನ್ನಷ್ಟೆ ಪ್ರೀತಿಸುತ್ತೇನೆ ಮತ್ತು ಗುರುವಚನದ ಮೂಲಕ ಅವನನ್ನು ಸಂಧಿಸುತ್ತೇನೆ; ಬಳಿಕ ನನ್ನನ್ನವನು ತೊರೆಯುವುದಿಲ್ಲ. (ಶ್ರೀರಾಗ. ಮೊ. ಅಷ್ಟಪದಿ 8:6)

ಬಂಡವಾಳವಿಲ್ಲದೆ ವ್ಯಾಪಾರಿ ನಾಲ್ಕು ಖಂಡಗಳನ್ನೂ ವ್ಯರ್ಥವಾಗಿ ದಿಟ್ಟಿಸುತ್ತಾನೆ; ಏಕೆಂದರೆ ತನ್ನ ಬಂಡವಾಳ ತನ್ನಲ್ಲೆ ಹುದುಗಿದೆಯೆಂಬ ಸತ್ಯ ಅವನಿಗೆ ತಿಳಿಯದು (ಶ್ರೀರಾಗ. ಮೊ. ಅಷ್ಟಪದಿ 2:6)

ಅವನು, ನಮ್ಮ ಭಗವಂತ, ನಮ್ಮನ್ನು ಪ್ರೇಮ—ಲಕ್ಷ್ಯಪೂರ್ವಕವಾಗಿ ಒರೆಗಲ್ಲಿನ ಮೇಲೆ ಪರೀಕ್ಷಿಸುತ್ತಾನೆ. (ಶ್ರೀರಾಗ. ಮೊ. ಅಷ್ಟಪದಿ 4:7)

ಜ್ಞಾನದ ಕಾಡಿಗೆ ಎಲ್ಲ ಭಯವನ್ನೂ ಚದುರಿಸುತ್ತದೆ; ನೀನು ಶುದ್ಧಾತ್ಮನನ್ನು ಆತನ ಪ್ರೇಮದಲ್ಲಿ ಕಾಣುವೆ. (ಶ್ರೀರಾಗ. ಮೊ. ಅಷ್ಟಪದಿ 3:7)

ನಾನು ಹುಡುಕಿ ಹುಡುಕಿ ನನ್ನ ಭಗವಂತನನ್ನು ಕಂಡೆ; ಆತನ ಭಯದಿಂದ ಅವನೊಡನೆ ನಾನು ಸಮಾಗಮಗೊಂಡೆ. (ಶ್ರೀರಾಗ. ಮೊ. ಅಷ್ಟಪದಿ 8:7)

"ನಿನ್ನ ಮಾರ್ಗದಲ್ಲಿ ನಾನು ನಡೆಯುವುದೆಂತೆಂಬುದನ್ನು ದಯವಿಟ್ಟು ಹೇಳು" ಎಂದು ನನ್ನ ಗುರುವನ್ನು ಕೇಳುತ್ತೇನೆ. ಆತ ಹೇಳುತ್ತಾನೆ: "ಭಗವಂತನ ಸ್ತುತಿಯನ್ನು ಮನದಲ್ಲಿಟ್ಟುಕೊ ಮತ್ತು ಅಹಂಕಾರವೇವನೆಯನ್ನು ಸುಟ್ಟುಹಾಕು; ಆಗ ನೀನು ಪ್ರಭುವನ್ನು ಆನಂದರಾಜ್ಯದಲ್ಲಿ ಸಂಧಿಸುವೆ — ಏಕೆಂದರೆ ಸತ್ಯವನ್ನು ಸತ್ಯದ ಮೂಲಕವೆ ಸಂಧಿಸಬೇಕು".

(ಶ್ರೀರಾಗ. ಮೊ. ಅಷ್ಟಪದಿ 4:8)

ದೇವನ ಪ್ರೇಮಾರಾಧನದಿಂದಲ್ಲದೆ ದೇಹ ಶುದ್ಧವಾಗದು.

(ಶ್ರೀರಾಗ. ಮೊ. ಅಷ್ಟಪದಿ 8:9)

ಕರ್ಮಾಚರಣೆಗೆ, ಚಿತ್ತದ ಪ್ರಾಂತಕ್ಕೆ ಅತೀತನಾಗಿದ್ದು, ಭಗವಂತ ಸರ್ವಜ್ಞನೆಂಬ ಅರಿವುಳ್ಳ ಭಕ್ತನೇ ಅನುಗೃಹೀತ. (ಶ್ರೀರಾಗ. ಮೊ)

ಸತ್ಯ ಮತ್ತು ತೃಪ್ತಿ : ಇವೆರಡೂ ನಿನ್ನ ತಾಳಗಳಾಗಿರಲಿ; ಭಗವಂತನನ್ನು ಕಾಣಬೇಕಾದರೆ ಇದು ಸದಾ ನಿನ್ನ ಮಾರ್ಮಿಕ ಸಂಗೀತವಾಗಿರಲಿ. ನಿನ್ನ ಮನದಲ್ಲಿರುವ ದೈವಭೀತಿಯೆ ನರ್ತನದ ಸುತ್ತಾಗಿರಲಿ. ದೂಳಿನಲ್ಲಿ ಉರುಳಾಡುವುದೆಂದರೆ ದೇಹವನ್ನು ದೂಳೆಂದು ತಿಳಿಯುವುದೇ.

(ಅಸ. ಮೊ. 6)

ಅಹಂಕಾರದ ಕೊಲೆ: ಇದೇ ಆರು ಶಾಸ್ತ್ರಗಳ ಸಾರ ಮತ್ತು ಸರ್ವ ವ್ಯಾಪಿಯಾದ ದೇವನ ಬೆಳಕನ್ನು ಎಲ್ಲದರಲ್ಲಿಯೂ ಸಾಕ್ಷಾತ್ಕರಿಸಿಕೊಳ್ಳಲು ಮೂಲಭೂತವಾದದ್ದು. (ಅಸ. ಮೊ. 2:11)

ಬೇರುಗಳು ಮಣ್ಣಿನಲ್ಲಿದ್ದರೂ ನೀರಿನಿಂದ ಮೇಲಕ್ಕಿದ್ದು ನಿರ್ಲಿಪ್ತವಾಗಿರುವ ತಾವರೆಯಂತೆ ಭಗವದಭಿಮುಖರು ಪ್ರೇಮಪೂರ್ಣರೂ, ಪರಿಶುದ್ಧರೂ ಆಗಿರುತ್ತಾರೆ. (ಅಸ. ಮೊ. 2:15)

ನೀನೆ ನಮ್ಮ ಶರೀರ ಮತ್ತು ಆತ್ಮವಾಗಿರುವಾಗ, ನಿನ್ನನ್ನು ಪೋಷಣೆಗಾಗಿ ಬೇಡಿಕೊಳ್ಳುವುದು ವೃಥಾ ಕಂಠಶೋಷಣೆ. (ಅಸ. ಮೊ. ವರ್ ಪೌರಿ 5)

ಹೃದಯದಲ್ಲಿ ನಿಜವಾದ ದೇವರು ನೆಲೆಗೊಂಡಾಗ ಮತ್ತು ನಮ್ಮ ಶರೀರದ ಹುಸಿಯನ್ನು ಕಳೆದು ಶುದ್ಧಿಗೊಳಿಸಿಕೊಂಡಾಗ ನಾವು ಸತ್ಯವನ್ನರಿಯುತ್ತೇವೆ.

(ಅಸ. ಮೊ. ವರ್)

ಸತ್ಯವನ್ನು ಪ್ರೀತಿಸಿದಾಗ ನಾವು ಸತ್ಯವನ್ನರಿಯುತ್ತೇವೆ. (ಅದೇ)

ನಮ್ಮ ಆತ್ಮಮಾರ್ಗವನ್ನು ಕಂಡುಕೊಂಡಾಗ ಮತ್ತು ನಾವು ನಮ್ಮ ದೇಹಕ್ಷೇತ್ರವನ್ನು ಉತ್ತು ಅದರಲ್ಲಿ ಭಗವದ್ಬೀಜವನ್ನು ಬಿತ್ತಿದಾಗ, ಸತ್ಯವನ್ನರಿಯುತ್ತೇವೆ. (ಅದೇ)

ನಿಜವಾದ ತಿಳಿವಳಿಕೆಯನ್ನು ನಾವು ಪಡೆದಲ್ಲಿ ಮತ್ತು ಜೀವಕೋಟಿಗೆ ಅನುಕಂಪೆದೋರಿ ನಮ್ಮಲ್ಲಿರುವ ಅಲ್ಪವನ್ನು ದಾನಮಾಡಿದಲ್ಲಿ, ಸತ್ಯವನ್ನರಿಯುತ್ತೇವೆ. (ಅದೇ)

ಆತ್ಮದ ಯಾತ್ರಾನಿಲ್ದಾಣದಲ್ಲಿ ನಾವು ತಂಗಿದಾಗ ಸತ್ಯವನ್ನರಿಯುತ್ತೇವೆ ; ಗುರುಸಂಕಲ್ಪದಂತೆ ನಮ್ಮ ತಂಗುವಿಕೆ. (ಅದೇ)

ಬೀಜವನ್ನು ಇಡಿಯಾಗಿ ಬಿತ್ತುವವರು ಪ್ರತಿಷ್ಠೆಯ ಬೆಳೆ ತೆಗೆಯುತ್ತಾರೆ ; ಆದರೆ ಒಡಕುಬೀಜ ಮೊಳೆಯುವುದೆಂತು ? ಮೊದಲನೆಯದಾಗಿ ಬೀಜ ಇಡಿಯಾಗಿರಬೇಕು, ಆಮೇಲೆ ಋತು ಪ್ರಶಸ್ತವಾಗಿರಬೇಕು (ಆಗ ಮಾತ್ರ ಬೀಜದ ಮೊಳಕೆ). (ಅದೇ)

ಶರೀರವೆಂಬ ಕಚ್ಚಾ ವಸ್ತ್ರವನ್ನು ದೇವರ ಭಯದಿಂದ ಕುದಿಸಿ, ನಮ್ರತೆಯಿಂದ ಹೊಳಪು ಕೊಟ್ಟು, ಅದನ್ನು ಭಕ್ತಿಯಲ್ಲಿ ಅದ್ದಿದಾಗ ದೈವೀವರ್ಣವನ್ನು ಪಡೆದುಕೊಳ್ಳುತ್ತದೆ. (ಆಸ. ಮೊ. ವರ್)

ದೇವರ ಭಯವೆಂಬ ಕಾಡಿಗೆಯನ್ನು ನಿಮ್ಮ ಕಣ್ಣುಗಳಿಗೆ ಹಚ್ಚಿಕೊಳ್ಳಿ. ಮತ್ತು ಪ್ರೇಮದಿಂದ ಅಲಂಕರಿಸಿಕೊಳ್ಳಿ. ನೀವು ನಿಮ್ಮ ಪ್ರಭುವನ್ನು ಪ್ರೀತಿಸಿದಾಗ ಮಾತ್ರವೆ ನಿಜವಾದ ವಧುವಾಗುತ್ತೀರಿ. (ತಿಲಂಗ್. ಮೊ. 4)

ನಿಜವಾದ ವಧುಗಳನ್ನು ಕೇಳಿ—ಅವರು ಹೇಗೆ ತಮ್ಮ ಸ್ವಾಮಿಯನ್ನು ಪಡೆದರೆಂದು. ಅವರು ಪಡೆದದ್ದು ಹೀಗೆ : ಅವನೇನು ಮಾಡಿದರೂ ಅವನ ಸಂಕಲ್ಪಕ್ಕೆ ಅವರು ಶರಣಾಗುತ್ತಾರೆ ; ಅವನೊಡನೆ ವಾದಮಾಡುವುದಿಲ್ಲ ಅಥವಾ ತಮ್ಮ ಸಂಕಲ್ಪವನ್ನು ಹೇರುವುದಿಲ್ಲ. ಯಾರ ಪ್ರೀತಿಯ ಮೂಲಕ ಬದುಕಿನ ಗುರಿ ಸಿಗುತ್ತದೋ ಅವನ ಚರಣಗಳಿಗೇಕೆ ಅಂಟಿಕೊಳ್ಳಬಾರದು ? ಅವನ ಅಪ್ಪಣೆಯಂತೆ ಆಚರಿಸಿ, ನಮ್ಮ ದೇಹಮನಗಳನ್ನು

ಅವನಿಗರ್ಪಿಸಿ ನಮ್ಮನ್ನೇಕೆ ಸೌರಭಯುತರನ್ನಾಗಿ ಮಾಡಿಕೊಳ್ಳಬಾರದು ? ನಿಜವಾದ ವಧು ಹೇಳುತ್ತಾಳೆ: 'ಸೋದರಿ, ಪ್ರಭುವನ್ನು ಪಡೆದದ್ದು ಹೀಗೆ'.

(ತಿಲಂಗ್. ಮೊ. 4)

ಮನಸ್ಸು ಹಗ್ಗದ ತುದಿಗಳಾಗಿರಲಿ, ಸತತ ಜಾಗೃತಿಯು ಕಡೆಗೋಲಾಗಿರಲಿ. ಭಗವನ್ನಾಮ ಸಂಕೀರ್ತನೆ ಮಥನವಾಗಲಿ ; ಹೀಗೆ ನೀವು ನವನೀತವನ್ನು—ಭಗವದನುಗ್ರಹದಮೃತವನ್ನು—ಪಡೆಯುತ್ತೀರಿ. ಸತ್ಯ ಕಾಸಾರದಲ್ಲಿ ಮಿಂದ ನಿಮ್ಮ ಮನ ಭಗವಂತನ ಆವಾಸವಾಗಿರಲಿ. ಭಕ್ತಿಯ ಪತ್ರಗಳನ್ನರ್ಪಿಸಿ, ನಿಮ್ಮ ಪ್ರಾಣವನ್ನು ಕೂಡ ಅವನಿಗೆ ಸಮರ್ಪಿಸಿ; ಇಂತು ನೀವು ನಿಮ್ಮ ಪ್ರಭುವಿನ ಸಮಾಗಮವನ್ನು ಅನುಭವಿಸುವಿರಿ.

(ಸುಹಿ. ಮೊ. 1)

ಧ್ಯಾನ, ಆತ್ಮಸಂಯಮಗಳ ದೋಣಿಯನ್ನು ಕಟ್ಟಿಕೊಳ್ಳಿ ; ಅದರಿಂದ ನೀವು ಭವಸಮುದ್ರವನ್ನು ದಾಟುತ್ತೀರಿ—ಸಮುದ್ರಗಳಾಗಲಿ ಅಲೆಗಳಾಗಲಿ ಇರಲಿಲ್ಲವೆನ್ನುವ ಹಾಗೆ. ನಿಮ್ಮ ಸುಲಭ ಪಥ ಇಂತಹುದು. (ಸುಹಿ. ಮೊ. 4)

ಯೋಗದ್ದು ಜ್ಞಾನಮಾರ್ಗ, ಬ್ರಾಹ್ಮಣರದು ವೇದಮಾರ್ಗ, ಕ್ಷತ್ರಿಯರದು ವೀರಮಾರ್ಗ, ಶೂದ್ರರದು ಅನ್ಯಸೇವಾಮಾರ್ಗ. ಆದರೆ ಮಾರ್ಗಗಳ ಮಾರ್ಗವೆಂದರೆ ದೈವೀವಚನದ್ದು. ಅದರ ರಹಸ್ಯವನ್ನರಿತವನ ಸೇವಕ ನಾನಕ್. ಅವನೇ ಪರಿಶುದ್ಧ ಪರಮಾತ್ಮನ ಸಾಕಾರರೂಪ.

(ಅಸ. ಮೊ. ವರ್ ಶ್ಲೋಕ 2)

ಕರುಣವೇ ಹತ್ತಿ, ಸಂತೃಪ್ತಿಯೇ ನೂಲು, ಬ್ರಹ್ಮಚರ್ಯವೇ ಗಂಟು, ಸತ್ಯವೇ ನುಲಿತ. ಇದೇ ಆತ್ಮದ ಪವಿತ್ರವಾದ ದಾರ. ಅದು ಹರಿಯುವುದಿಲ್ಲ, ಕೊಳೆಯಾಗುವುದಿಲ್ಲ, ವ್ಯರ್ಥವಾಗುವುದಿಲ್ಲ ಅಥವಾ ಸುಟ್ಟು ಹೋಗುವುದಿಲ್ಲ.

(ಅಸ. ಮೊ. ವರ್ ಶ್ಲೋಕ. ಮೊ)

ಎಂಟು ಪವಾಡಶಕ್ತಿಗಳಿಂದ ಕೂಡಿ ಮನವನ್ನು ಸಂಯಮಿಸಿ, ಕಾರ್ಯಗಳ ಮೂಲಕ ನಿರ್ಲಿಪ್ತ ಭಗವಂತನಲ್ಲಿ ನೆಲೆಗೊಂಡು, ಒಳಗಿನ ವಾಯು ಜಲ ಅಗ್ನಿಗಳನ್ನು ಗೆಲ್ಲುವಾತನ ಆಂತರ್ಯದಲ್ಲಿ ಪರಿಶುದ್ಧ ಪ್ರಭುವಿನ ನಿಜವಾದ ನಾಮ ಪ್ರಕಟವಾಗುತ್ತದೆ. (ಬಿಲವಲ್. ಮೊ. ೧೧)

ಜ್ಞಾನದ ಕಾಡಿಗೆ ಎಲ್ಲ ಭಯವನ್ನೂ ಚದುರಿಸುತ್ತದೆ; ಮನವನ್ನು ಸ್ವಸ್ಥಾನದಲ್ಲಿರಿಸುವವನು ಪರಿಶುದ್ಧ ಪರಮಾತ್ಮನನ್ನು ಪ್ರೇಮದಲ್ಲಿ ಕಾಣು ತ್ತಾನೆ ಮತ್ತು ಸ್ಥೂಲಸೂಕ್ಷ್ಮಗಳೆರಡನ್ನೂ ಅರಿಯುತ್ತಾನೆ. (ಶ್ರೀರಾಗ. ಮೊ. 7)

ನಿಜವಾದ ಗುರುವನ್ನು ಕಂಡಾಗ ಸಂಶಯ ಹರಿಯುತ್ತದೆ ಮತ್ತು ಮನಸ್ಸಿನ ಬಾಹ್ಯಗಮನ ನಿಲ್ಲುತ್ತದೆ; ಆಗ ಮನದ ಸೆಲೆಯಿಂದ ಆನಂದ ಚಿಮ್ಮುತ್ತದೆ ಮತ್ತು ವ್ಯಕ್ತಿ ಸ್ವಗೃಹದಲ್ಲೆ ಸಮಚಿತ್ತತೆಯ ಸುಸ್ವರಕ್ಕೆ ಅನುಗೊಳಿಸಲ್ಪಟ್ಟು ತನ್ನ ಸಂಗಾತಿಗೆ ಆತ್ಮೀಯನಾಗುತ್ತಾನೆ. (ಸುಹಿ. ಮೊ.)

ಭಗವನ್ನಾಮವೆ ಬೆಂಬಲವಾದಾಗ ಮತ್ತು ಭಗವಂತನನ್ನು ಪ್ರೀತಿಸಿದಾಗ ಚಂಚಲವಾದ ಚಿತ್ತವು ತನ್ನ ನಿಜ ಆವಾಸವಾದ ಸತ್ಯದಲ್ಲಿ ಸೆರೆಯಾಗಿ ನೆಲೆ ಗೊಳ್ಳುತ್ತದೆ. ಆಗ ಸೃಷ್ಟಿಕರ್ತನಾದ ದೇವರು ಅಂತಹವರನ್ನು ತನ್ನಲ್ಲಿ ಐಕ್ಯ ಗೊಳಿಸಿಕೊಳ್ಳುತ್ತಾನೆ. (ರಾಮಕಲಿ. ಮೊ. ಸಿದ್ಧಗೋಷ್ಠಿ)

ಮನೆಯ ಒಳಗಾಗಲಿ ಹೊರಗಾಗಲಿ ಮನಸ್ಸು ನಿದ್ರಿಸದಿರಲಿ. (ಅದೇ)

ನನ್ನ ದೇಹ ಭಿಕ್ಷುಕನೊಬ್ಬನ ಸರಳತೆಯನ್ನು ಧರಿಸಿದೆ; ನನ್ನ ಮನಸ್ಸೆ ದೇವಾಲಯ. ನಾನು ನನ್ನ ಹೃದಯದ ಚಿಲುಮೆಯಲ್ಲಿ ಮಿಯುತ್ತೇನೆ. ಪ್ರಭುವಿನ ವಾಣಿ ಮಾತ್ರ ನನ್ನ ಮನಸ್ಸಿನಲ್ಲಿ ನೆಲಸಿದೆ; ಆದ್ದರಿಂದ ನಾನು ಮತ್ತೆ ಗರ್ಭಸ್ಥನಾಗುವುದಿಲ್ಲ. (ಬಿಲವಲ್. ಮೊ. 2)

ನಿಮ್ಮ ಪ್ರಜ್ಞೆಯನ್ನು ನಿಮ್ಮ ದೇವನಲ್ಲಿ ಹೀಗೆ ವಿಲೀನಗೊಳಿಸಿರಿ: ನಿಮ್ಮ ದೇಹವನ್ನೊಂದು ತೆಪ್ಪವನ್ನಾಗಿ ಮಾಡಿಕೊಂಡು ಸಾಗರವನ್ನು ದಾಟಿರಿ. ನಿಮ್ಮಲ್ಲಿ ಆಸೆಯ ಬೆಂಕಿಯಿದೆ, ಅದನ್ನು ನಂದಿಸಿರಿ; ಆಗ ಜ್ಞಾನಜ್ಯೋತಿ ನಿಮ್ಮಲ್ಲಿ ಸದಾ ಪ್ರಜ್ವಲಿಸುವುದು. ಈ ಜ್ಯೋತಿ ನೀವು ಭವಜಲಧಿಯನ್ನೀಜು ವಂತೆ ಮಾಡುವುದು. ಆಗ ನಿಮ್ಮ ಮನಸ್ಸು ಪ್ರಕಾಶಗೊಂಡು ನೀವು ಸರ್ವಜ್ಞ ರಾಗುವಿರಿ. (ರಾಮಕಲಿ. ಮೊ. 7)

ಸತ್ಯವೊಂದನ್ನೆ ಆಚರಿಸಿರಿ; ಏಕೆಂದರೆ ಪ್ರತಿಯೊಂದು ಅನ್ಯಮೋಹವೂ ವ್ಯರ್ಥ; ಈ ಚಿತ್ತ ಸತ್ಯನೊಬ್ಬನಿಂದಲೇ ಮೋಹಗೊಳ್ಳಲಿ ಮತ್ತು ನಾಲಗೆ ಸತ್ಯವನ್ನಲ್ಲದೆ ಮತ್ತೇನನ್ನೂ ಸವಿಯದಿರಲಿ. ಏಕೆಂದರೆ ಪ್ರಭುವಿನ ನಾಮ

ವಿನಾ ಮತ್ತೆಲ್ಲವೂ ಸಪ್ಪೆ ; ಭಗವಂತನಿಗೆ ಸೇರದವರು ತಮ್ಮ ತಲೆಗಳ ಮೇಲೆ ಪಾಪದ ಹೊರೆಯನ್ನು ಹೊರುತ್ತಾರೆ. (ಮರು. ಮೊ. 4)

ತನ್ನನ್ನು ತಾನು ಅರಿತವನು ದೇವರನ್ನರಿಯುತ್ತಾನೆ. ಮತ್ತು ಅವನ ಆತ್ಮ ಪರಮಾತ್ಮನಲ್ಲಿ ಐಕ್ಯಗೊಳ್ಳುತ್ತದೆ. (ಮರು. ಮೊ. 5)

ಗುರುವಚನದ ಮೂಲಕ ಯಾವಾತ ನಿರ್ಲಿಪ್ತನಾಗಿ ಉಳಿಯುತ್ತಾನೊ ಅವನು ನಿರ್ಭೀತಿಯ ಮನೆಯಲ್ಲಿ ತನ್ನ ಭಗವಂತನನ್ನು ಕಂಡುಕೊಳ್ಳುತ್ತಾನೆ. (ಮರು. ಮೊ. 20)

ನಿಷ್ಕಾಮಕರ್ಮಗಳೆ ಕಾಂಡವಾಗಿರಲಿ, ಪ್ರಭುನಾಮವೆ ಶಾಖೆಗಳಾಗಿರಲಿ, ಧರ್ಮವೆ ಹೂವುಗಳಾಗಿರಲಿ, ಅಧ್ಯಾತ್ಮವಿದ್ಯೆಯೆ ಹಣ್ಣಾಗಿರಲಿ, ಸಾಕ್ಷಾತ್ಕಾರವೇ ಎಲೆಗಳಾಗಿರಲಿ, ಚಿತ್ತದ ಅಹಂಕಾರ ನಿರಸನವೆ ನೆರಳಾಗಿರಲಿ. ಪ್ರಬಲ ಶಕ್ತಿಯನ್ನು ನಿಮ್ಮ ಕಣ್ಣುಗಳಿಂದ ನೋಡಿ, ಅವನ ವಾಣಿಯನ್ನು ನಿಮ್ಮ ಕಿವಿಗಳಿಂದ ಕೇಳಿ, ನಿಮ್ಮ ಬಾಯಿಂದ ಅವರ ನಾಮವನ್ನುಚ್ಚರಿಸಿ. ಕೀರ್ತಿಯ ಸಾಮಗ್ರಿಗಳು ಹೀಗೆ ಸಂಗ್ರಹಗೊಳ್ಳುತ್ತವೆ ಮತ್ತು ವ್ಯಕ್ತಿ ಸಮಚಿತ್ತಸ್ಥಿತಿಯಲ್ಲಿ ಭಗವಂತನಿಗೆ ಅಳವಡುತ್ತಾನೆ.

(ರಾಗ್ ಬಸಂತ. ಮೊ. ಚೌಪದಿ)

ನಿನ್ನ ಕಡಾಣಿಗಳು ಯಮನ ಹಿಡಿತದಲ್ಲಿವೆ; ಆದರೂ ನಿನಗೆ ಅರಿವಿಲ್ಲವೆ, ಓ ಮನಸ್ಸೆ ? (ತಿಲಂಗ್. ಮೊ. 1)

ನನ್ನ ಹೆಂಡತಿ, ಮಗ, ತಂದೆ, ಸೋದರ—ಇವರಲ್ಲಿ ಯಾರು ನನ್ನ ಕೈ ಹಿಡಿಯುವವರು ? ನಾನು ಸಮಾಧಿಗೊಳ್ಳುವಾಗ, ಅಂತಿಮ ಪ್ರಾರ್ಥನೆ ಪಠಿತವಾಗುವಾಗ ಯಾರೂ ನನ್ನ ರಕ್ಷಣೆಗೆ ಬರುವುದಿಲ್ಲ.

(ರಾಗ್ ತಿಲಂಗ್. ಮೊ. 1)

ಸತ್ಯವನ್ನು ಕಂಡು ಗುರುವಿನ ಜ್ಞಾನವನ್ನು ಪಡೆಯುವವರು ತಮ್ಮ ನಿಜವಾದ ಬದುಕಿನಿಂದಾಗಿ ಹುಟ್ಟುಸಾವುಗಳಿಲ್ಲದವರಾಗುತ್ತಾರೆ; ಅವರ ಆಗಮನ ನಿರ್ಗಮನಗಳು ಕೊನೆಗೊಳ್ಳುತ್ತವೆ. (ಶ್ರೀರಾಗ. ಮೊ. 4 : 07)

ತನ್ನ ನಿಜವಾದ ಪ್ರಭುವಿನಲ್ಲಿ ಐಕ್ಯಳಾಗದಿದ್ದಲ್ಲಿ ವಧು ವಿಧವೆಯಾಗುತ್ತಾಳೆ. (ಶ್ರೀರಾಗ ಮೊ. ಅಷ್ಟಪದಿಗಳು 5 : 2)

ಬರುವವರು ಮತ್ತು ಹೋಗುವವರು ಅಹಂಕಾರಬದ್ಧರೇ; ಏಕೆಂದರೆ ದೇವಮಾನವ ಸದಾ ಸತ್ಯನಿವಾಸಿಯಾಗಿರುತ್ತಾನೆ.

(ರಾಮಕಲಿ. ಮೊ. ಸಿದ್ಧಗೋಷ್ಠಿ)

ಮನುಷ್ಯ ದೈವೀಸಂಕಲ್ಪದಿಂದ ಉದಿಸುತ್ತಾನೆ, ಆ ಸಂಕಲ್ಪದಂತೆಯೇ ನಿರ್ಗಮಿಸುತ್ತಾನೆ ; ಆ ಸಂಕಲ್ಪದಲ್ಲಿಯೆ ವಿಲೀನನಾಗುತ್ತಾನೆ. (ಅದೇ)

ಅಸತ್ಯರು ಪ್ರಪಂಚಕ್ಕೆ ಬರುತ್ತಾರೆ, ಆದರೆ ಆಶ್ರಯವನ್ನು ಕಾಣದೆ ಬಂದು ಹೋಗುತ್ತಾರೆ. (ಅದೇ)

ಗುರುಕೃಪೆಯಿಂದ ಅರಿವು ಪಡೆದವರು ಹುಟ್ಟುವುದಿಲ್ಲ, ಸಾಯುವುದಿಲ್ಲ ; ಬರುವುದಿಲ್ಲ ಅಥವಾ ಹೋಗುವುದಿಲ್ಲ. ಅವರು ತಮ್ಮ ಮೂಲಶಕ್ತಿಯಂತಿರುತ್ತಾರೆ. (ಅದೇ)

ಗುರುಕೃಪೆಯಿಂದ ಸುಖದುಃಖಗಳನ್ನು ಸಮಭಾವದಿಂದ ನೋಡುವಾತ ಮೃತ್ಯುವನ್ನು ಸವಿಯುವುದಿಲ್ಲ. (ಅದೇ)

(ಬದುಕಿನ) ದೋಣಿಯಲ್ಲಿ ಪಾಪವನ್ನು ಹೇರಿ (ಭವ) ಸಮುದ್ರದ ಮೇಲೆ ಬಿಡುವವನು ಎದುರು ದಡವನ್ನು ಅಥವಾ ಬಂದರನ್ನು ಕಾಣುವುದಿಲ್ಲ. ಸಮುದ್ರ ಭಯಾನಕವಾಗಿದೆ, ಆದರೆ ಅಂಬಿಗರಾಗಲಿ ದೋಣಿಯನ್ನು ಕಡೆ ಹಾಯಿಸುವ ಹುಟ್ಟುಗಳಾಗಲಿ ಇಲ್ಲ. (ಮರು ಮೊ. 2)

ಶರೀರವೆಂಬುದು ಗಾಳಿಯಾಡುವ ಮಣ್ಣು ಮಾತ್ರ. ಮಣ್ಣು ಮಣ್ಣಿಗೆ ಮರಳಿದಾಗ, ಗಾಳಿ ಗಾಳಿಯಲ್ಲಿ ಸೇರಿದಾಗ ಸಾಯತಕ್ಕದ್ದು ಯಾವುದು ? ವ್ಯಕ್ತಿಪ್ರಜ್ಞೆ ಸಾಯುತ್ತದೆ ; ಹೋರಾಟ ಸಾಯುತ್ತದೆ, ಅಹಂಕಾರ ಸಾಯುತ್ತದೆ; ಆದರೆ ಎಲ್ಲವನ್ನು ಕಾಣುವ ಆತ್ಮ ಸಾಯದು. (ಗಾಂ. ಮೊ.)

## ಬಾರಿಸದ ಸುಸ್ವರ

ನೀವು ಕೇಳಬಯಸುವ ಬಾರಿಸದ ಸುಸ್ವರವನ್ನು ಗುರೂಪದೇಶದಲ್ಲಿ ಕೇಳಿರಿ. (ಶ್ರೀರಾಗ, ಮೊ. 2:18)

ನಿಮ್ಮ ಪ್ರಭು ದಿವ್ಯವಚನದ ಬಾರಿಸದ ಸುಸ್ವರದಲ್ಲಿ ಮಗ್ನನಾಗಿದ್ದಾನೆ. (ಆಸ ಮೊ. 4:8)

ಗುರುವಚನದ ಧ್ಯಾನದಿಂದ ಬಾರಿಸದ ಹಿತಕರವಾದ ಸುಸ್ವರಗಳನ್ನು ಆಲಿಸಬಹುದು. (ಶ್ರೀರಾಗ. ಮೊ.)

ಜನನ ಮರಣ ವಿನಾಶಿಯೆ, ನಿನ್ನ ಪೂಜೆಯನ್ನೆಸಗುವುದೆಂತು ? ಆಂತರಿಕ ನಾದ ಬಾರಿಸದ ಸುಸ್ವರ ನಿನ್ನ ಕೀರ್ತಿಯನ್ನು ಸದಾ ಮೊಳಗಿಸುತ್ತದೆ. (ಧನಶ್ರೀ ಮೊ. ಆರ್ತಿ)

ಬಾರಿಸದ ಸುಸ್ವರವನ್ನು ನಾನು ಕೇಳುತ್ತಿರುವುದರಿಂದ ನನ್ನ ಶಂಕೆ ಭಯಗಳೆಲ್ಲ ಈಗ ತೂರಿಹೋಗಿವೆ. (ಮರು. ಮೊ.)

ದಿವ್ಯವಾಣಿಯ ಸುಸ್ವರಕ್ಕೆ ಯೋಗಿ ಶ್ರುತಿಗೊಂಡಿರುವುದರಿಂದ ಮನಸ್ಸು ತೊಳಲಾಡುವುದಿಲ್ಲ ಅಥವಾ ವಾಯು ಅಳಲುವುದಿಲ್ಲ. ಸೂಕ್ಷ್ಮವಾದ ಪಂಚಸ್ವರಗಳು ಅವನನ್ನು ನಿರ್ಲಿಪ್ತನನ್ನಾಗಿಸುತ್ತವೆ. ನಿಜಕ್ಕೂ ಒಳಗಿನ ವೀಣೆಯನ್ನು ನುಡಿಸುವವನು ಭಗವಂತ. (ಮರು ಮೊ.)

ಬಾರಿಸದ ಪಂಚಸ್ವರಗಳ ಮೂಲಕ ವ್ಯಕ್ತಿಯ ಮೋಹ, ಕ್ರೋಧ, ಅಹಂಕಾರಗಳನ್ನು—ಪಂಚಚೋರರನ್ನೆಲ್ಲ—ಗೆಲ್ಲುತ್ತಾನೆ ಮತ್ತು ಜ್ಞಾನಖಡ್ಗ ದಿಂದ ಮನಸ್ಸಿನೊಡನೆ ಹೋರುತ್ತಾನೆ; ಮನಸ್ಸಿನ ಬಯಕೆಗಳು ಮನ ದಲ್ಲಿಯೆ ಕರಗುತ್ತವೆ. (ಮರು. ಮೊ.)

(ಭಗವದ್ವಾಣಿಯ) ಅನಾಹತ ಸುಸ್ವರ ಹಗಲಿರುಳೂ ಒಳಗೆ ಮಿಡಿದಾಗ ಗುರುಕೃಪೆಯಿಂದ ಮರಣರಹಿತನಾದ ಪರಮಾತ್ಮನ ಅನಂತತೆ ಅರಿವಾಗು ತ್ತದೆ. (ರಾಮಕಲಿ. ಮೊ. 3)

ಬಾರಿಸದ ಸುಸ್ವರ ಒಳಗೆ ಮಿಡಿದಲ್ಲಿ, ಭಯ ಸಂಶಯಗಳು ತೊಲಗುತ್ತವೆ.
(ಮರು. ಮೊ. ೭೩೬)

ಸಾರದ್ರವ್ಯವು ತನ್ನ ಸದೃಶದಲ್ಲಿ ಲೀನವಾದಾಗ, ಮನಸ್ಸು ಸಂತೃಪ್ತಿಗೊಂಡು ಅನ್ಯದ ಪ್ರಜ್ಞೆಯನ್ನು ಕೊಡವಿಕೊಳ್ಳುತ್ತದೆ; ಆಗ ವ್ಯಕ್ತಿಯ ಮನಸ್ಸು ಸ್ವಸ್ಥಾನಕ್ಕೆ ಮರಳುತ್ತದೆ ಮತ್ತು ಜೀವನ ಪ್ರವಾಹ ಒಳಗೆ ಹರಿದು, ದಶಮದ್ವಾರದ ಆಕಾಶವು ಬಾರಿಸದ ಸುಸ್ವರದಿಂದ ಅನುರಣಿಸುತ್ತದೆ. (ರಾಮಕಲಿ. ಮೊ. ಸಿದ್ಧಗೋಷ್ಠಿ)

ಶೂನ್ಯಪ್ರಾಂತಕ್ಕೆ ಅಳವಟ್ಟ ಚತುರ್ಥಾವಸ್ಥೆಯ ಮನೆಯಲ್ಲಿ ಸುಸ್ವರವನ್ನು ಕೇಳಿ; ಆಗ ನೀವು ಅನಿರ್ವಚನೀಯವಾದ ವಾಣಿಯನ್ನು ಪ್ರತಿಫಲಿಸುತ್ತೀರಿ ಮತ್ತು ನಿಮ್ಮ ಮನದ ಬಹಿರ್ಗಮನಗಳು ಮನದಲ್ಲಿ ವಿಲೀನವಾಗುತ್ತವೆ. (ಮಲ್ಹಾರ ಮೊ.)

ಪ್ರೇಮಿಸದವರು ಭಗವಂತನ ಸವಿಯನ್ನರಿಯರು. ಏಕೆಂದರೆ, ಖಾಲಿ ಮನೆಗೆ ಅತಿಥಿಯಾಗಿ ಬರುವವನು ಖಾಲಿಯಾಗಿಯೆ ಮರಳುತ್ತಾನೆ.
(ಶ್ಲೋಕ ಮೊ. ವರ್. ರಾಗ ಸುಹಿ ಮೊ. 3)

ಪ್ರೇಮಪಂಜರದಲ್ಲಿ (ಚಿತ್ತದ) ಗಿಳಿ ಪ್ರಣಯವಾಕ್ಯಗಳನ್ನು ಉಚ್ಚರಿಸುತ್ತದೆ; ಅದು ಸತ್ಯವನ್ನು ಕುಕ್ಕಿ ಅಮೃತವನ್ನು ಹೀರುತ್ತದೆ; ಅದು ಒಮ್ಮೆ ಹಾರಿಹೋದರೆ ಮತ್ತೆ ಬಾರದು. (ಮರು. ಮೊ. 2)

ಇರುವುದೊಂದೇ ಭಕ್ತಿ ಮತ್ತು ಒಂದೇ ಪ್ರೇಮ; ಆದರೆ ಭಗವದ್ಭಯದಿಂದ ಬಣ್ಣಗೊಳ್ಳದ ಪ್ರೇಮ ಬರಿಯ ಭ್ರಾಂತಿ. (ಬಸಂತ ಮೊ. 3)

## ಪವಿತ್ರ ಸಹವಾಸ

ಪವಿತ್ರಾತ್ಮರ ಸಹವಾಸದಲ್ಲಿ ಮೋಕ್ಷದಾಯಿಯೂ ಕಾಮಧೇನು ಸದೃಶನೂ ಆದ ಗುರುವನ್ನು ಪಡೆಯಬಹುದು. (ಶ್ರೀರಾಗ ಮೊ. 2:12)

ಸಂತರ ಸಹವಾಸ ಎಂತಹುದು? ಅವರು ಏಕೈಕ ದೇವನ ನಾಮ ವನ್ನುಚ್ಚರಿಸುತ್ತಾರೆ. (ಶ್ರೀರಾಗ ಮೊ.)

ಸಂತಸಂಸರ್ಗದಲ್ಲಿ ಧರ್ಮವನ್ನು ಬಯಸಿದಲ್ಲಿ ಅದು ಪುಣ್ಯವನ್ನೀಯು ತ್ತದೆ; ಅವನ ಮನ ಸುಖಗೊಳ್ಳುತ್ತದೆ. ವ್ಯಕ್ತಿಯ ಮುಖ ಸಂತರ ಪಾದ ಧೂಳಿಯಿಂದ ಸ್ನಾತಗೊಂಡಾಗ ಮನಸ್ಸಿನ ಕಟ್ಟಿಣ ಹೊನ್ನಾಗಿ ಮಾರ್ಪಡು ತ್ತದೆ. (ರಾಮಕಲಿ. ಮೊ. ದಖನಿ ಓಂಕಾರ್ 3)

## ಸಂತರು

ಪರಲೋಕಕ್ಕೆ ನಮ್ಮೊಡನೆ ಬರುವವರು ಹಾಗೂ ನಮ್ಮ ವಿಚಾರಣೆಯ ಕಾಲದಲ್ಲೆಲ್ಲ ಜಾಮೀನಾಗಿ ನಿಲ್ಲುವವರೇ ಸ್ನೇಹಿತರು.
(ಸುಹಿ. ಮೊ.)

ದೇವ-ಮಾನವ ತನ್ನಿಚ್ಛೆಯಂತೆ ಬರುತ್ತಾನೆ ಮತ್ತು ಹೋಗುತ್ತಾನೆ.
(ರಾಮಕಲಿ. ಮೊ.)

## ಉತ್ಪತ್ತಿ

ಸತ್ಯದಿಂದ ವಾಯು ಬಂತು; ವಾಯುವಿಂದ ಜಲ ಬಂತು; ಅವನು ಜಲದಿಂದ ಮೂರು ಲೋಕಗಳನ್ನೂ ಸೃಷ್ಟಿಸಿದನು; ಎಲ್ಲ ಹೃದಯಗಳನ್ನೂ ತನ್ನ ಬೆಳಕಿನಿಂದ ತುಂಬಿದನು. (ಶ್ರೀರಾಗ ಮೊ.)

## ನಿರ್ಲಿಪ್ತತೆ

ತಾವರೆ ನೀರಿನಲ್ಲಿ ನಿರ್ಲಿಪ್ತವಾಗಿ ವಾಸಿಸುವಂತೆ, ಬಾತು ಪ್ರವಾಹದ ಮೇಲೆ ನಿಶ್ಚಿಂತೆಯಿಂದ ತೇಲುವಂತೆ, ಮನಸ್ಸು ದಿವ್ಯವಾಣಿಗೆ ಹೊಂದಿಕೊಂಡಿದ್ದಲ್ಲಿ ಭವಸಾಗರವನ್ನು ದಾಟುತ್ತದೆ. ಏಕಮೇವ ಭಗವಂತನನ್ನು ಮನಸ್ಸಿನಲ್ಲಿ ನೆಲೆಗೊಳಿಸಿಕೊಂಡು, ಆಸೆಯ ನಡುವೆ ಬಾಳುತ್ತಿದ್ದರೂ, ಆಸೆಯಿಂದ ಮುಕ್ತನಾಗಿ, ಅಗ್ರಾಹ್ಯವೂ ಅಗಾಧವೂ ಆದುದನ್ನು ಕಾಣುತ್ತ ನಿರ್ಲಿಪ್ತನಾಗಿ ಬದುಕುವವನಿಗೆ ನಾನಕ್ ಸೇವಕನಾಗಿರುತ್ತಾನೆ.

(ರಾಮಕಲಿ. ಮೊ. ಸಿದ್ಧಗೋಷ್ಠಿ 15)

## ಕೆಟ್ಟ ಸಹವಾಸ

ಅಧಾರ್ಮಿಕ ವ್ಯಕ್ತಿಗಳು ಒಂದೇ ಪಾತ್ರೆಯಲ್ಲಿ ಭುಂಜಿಸುವಂತೆ ಕಳ್ಳರು, ಅಕ್ರಮ ಪ್ರಣಯಿಗಳು, ವೇಶ್ಯೆಯರು ಮತ್ತು ದಳ್ಳಾಳಿಗಳು ಯಾವಾಗಲೂ ಜೊತೆಜೊತೆಯಾಗಿರುತ್ತಾರೆ. ಅವರಿಗೆ ಪ್ರಭುವಿನ ಸ್ತುತಿ ತಿಳಿಯದು; ಅವರೊಳಗೆ ಕೆಡುಕು ಮನೆಮಾಡಿದೆ. ಕತ್ತೆಗೆ ಚಂದನ ಲೇಪಿಸಿದರೂ, ಅದು ದೂಳಿನಲ್ಲಿ ಹೊರಳಾಡುತ್ತದೆ. (ಶ್ಲೋಕ ಮೊ. ವರ್. ರಾಗ ಸುಹಿ 3)

## ವಿಧಿ ಕರ್ಮಾಚರಣೆ

ಅವರು ಪವಿತ್ರ ಗ್ರಂಥಗಳನ್ನೋದುತ್ತಾರೆ, ಪ್ರಾರ್ಥನೆ ಮಾಡುತ್ತಾರೆ, ಅನಂತರ ಕಚ್ಚಾಡುತ್ತಾರೆ. ಅವರು ಕಲ್ಲು ಮರಗಳನ್ನು ಪೂಜಿಸುತ್ತಾರೆ; ಅನಂತರ ಬಕಗಳಂತೆ ಹುಸಿ ಸಮಾಧಿಗೆ ಹೋಗುತ್ತಾರೆ. ಅವರು ನಿಷ್ಠಾವಂತರಾಗಿ ತೋರಿಸಿಕೊಂಡರೂ, ದಿನಕ್ಕೆ ಮೂರು ಸಲ ಗಾಯತ್ರಿಯನ್ನು ಪಠಿಸಿ

ದರೂ ಅವರ ಬಾಯಲ್ಲಿ ಅಸತ್ಯ ತುಂಬಿಕೊಂಡಿರುತ್ತದೆ. ಅವರ ಕೊರಳಿನ ಸುತ್ತ ಜಪಮಾಲೆಯಿದೆ, ಹಣೆಯ ಮೇಲೆ ಕೇಸರಿಯ ಗುರುತಿದೆ; ಸೊಂಟದಲ್ಲಿ ಹೊಲಿಯದ ದಟ್ಟಿಯಿದೆ, ತಲೆಯ ಮೇಲೆ ಮುಸುಕಿದೆ; ಆದರೆ ಅವರಿಗೆ ತಮ್ಮ ದೇವರ ಸ್ವರೂಪ ಗೊತ್ತಿದ್ದಲ್ಲಿ, ಈ ಕರ್ಮಾಚರಣೆಯೆಲ್ಲ ಹುಸಿಯೆಂದು ಅವರಿಗರಿವಾಗುತ್ತಿತ್ತು. (ಅದೇ)

ಪ್ರಭುವಿನ ಸ್ತುತಿಯೇ ಯಜ್ಞೋಪವೀತ. (ಅದೇ)

ನರಭಕ್ಷಕರು ಐದು ಪ್ರಾರ್ಥನೆಗಳನ್ನು ಹೇಳುತ್ತಾರೆ! ಚೂರಿ ಬಳಕೆಗಾರರು ಯಜ್ಞೋಪವೀತ ಧರಿಸಿದ್ದಾರೆ! ಅವರ ಹಣೆಯ ಮೇಲೆ ಕೇಸರಿಯ ಚಿಹ್ನವಿದೆ, ಅವರ ಸೊಂಟದಲ್ಲಿ ಹೊಲಿಯದ ದಟ್ಟಿಯಿದೆ; ಆದರೆ ಅವರ ಕೈಗಳಲ್ಲಿ ಚೂರಿಯಿದೆ; ಅವರು ಲೋಕದ ಕಟುಕರೆಂದು ತಿಳಿಯಿರಿ.
(ಅದೇ)

ಒಳಗೆ ಹುಸಿ, ಹೊರಗೆ ಪ್ರತಿಷ್ಠೆ : ಇದು ಜಗತ್ತಿನಲ್ಲಿ ವಂಚಕನ ಮಾರ್ಗ. ಅವನು ಅರುವತ್ತೆಂಟು ಯಾತ್ರಾಸ್ಥಳಗಳಲ್ಲಿ ಮಿಂದರೂ ಅವನ ಕೊಳೆ ಹೋಗುವುದಿಲ್ಲ. ಚಿಂದಿಯನ್ನುಟ್ಟಿದ್ದರೂ ಯಾರ ಹೃದಯ ರೇಷ್ಮೆಯಂತೆ ಮೃದುವೋ ಅವರೇ ಭೂಮಿಯಲ್ಲಿ ಅನುಗೃಹೀತರು. ಏಕೆಂದರೆ ಅವರು ತಮ್ಮ ಪ್ರೇಮಕ್ಕೆ ಶ್ರುತಿಗೂಡಿಕೊಂಡಿದ್ದಾರೆ ಮತ್ತು ಭಗವದ್ದರ್ಶನಕ್ಕಾಗಿ ಸದಾ ಹಂಬಲಿಸುತ್ತಾರೆ; ತಮ್ಮ ಪ್ರಭು ವಿನಾ ಮತ್ತೇನನ್ನೂ ಬಯಸುವುದಿಲ್ಲ; ಅವನು ಕೊಟ್ಟಿದ್ದನ್ನು ತಿಂದು ಅವನ ಬಾಗಿಲು ಕಾಯುತ್ತಾರೆ.
(ಅದೇ)

ನಾವು ಪವಿತ್ರ ಗ್ರಂಥಗಳ ಹೊರೆಹೊರೆಯನ್ನೆ ಎಷ್ಟೋ ವರ್ಷ ಓದುತ್ತೇವೆ, ಜೀವಮಾನವೆಲ್ಲ ಓದುತ್ತೇವೆ; ಆದರೆ ಭಗವಂತ ಗಣಿಸತಕ್ಕದ್ದು ಒಂದೇ ಒಂದು. ಅದು ನಮ್ಮ ಹೃದಯ. ಉಳಿದದ್ದೆಲ್ಲ ವ್ಯರ್ಥಾಲಾಪ.
(ಆಸ ಮೊ. ವರ್)

ಹಠಯೋಗದಿಂದ ಆಸೆಯನ್ನು ದಮನಮಾಡಿದರೆ ದೇಹ ಕ್ಷಯವಾಗುತ್ತದೆ. ಉಪವಾಸ ತಪಗಳಿಂದ ಚಿತ್ತ ದಮನವಾಗದು. (ರಾಮಕಲಿ. ಮೊ. 5)

ಯಾತ್ರಾಸ್ಥಳಗಳಿಗೆ ಅಲೆಯುವುದರಿಂದ ವ್ಯಾಧಿಗಳು ತೊಲಗುವುದಿಲ್ಲ.
(ರಾಮ ಕಲಿ. ಮೊ. 6)

ಯಾರಾದರೊಬ್ಬ ತನ್ನ ವಸ್ತ್ರಗಳನ್ನು ಕಾವಿಯಲ್ಲದ್ದಿ, ಭಿಕ್ಷುಕ ಸಂಕೇತದ ಮೇಲಂಗಿಯನ್ನು ತೊಟ್ಟು, ಮಾಮೂಲು ವಸ್ತ್ರಗಳನ್ನು ಹರಿದು ಮೇಲಂಗಿಯನ್ನು ಕಾಸುಗಳ ಸಂಗ್ರಹಕ್ಕಾಗಿ ಹಾಸಿ, ಮನೆಯಿಂದ ಮನೆಗೆ ಹೋಗಿ ತಿರಿಯುತ್ತ, ಇತರರಿಗೆ ಜ್ಞಾನಬೋಧೆ ಮಾಡಿದಲ್ಲಿ ಅವನ ಮನದ ಅಂಧತೆಯ ಕಾರಣವಾಗಿ ಅವನ ಗೌರವವೆಲ್ಲ ಮಣ್ಣುಗೂಡುತ್ತದೆ. ಅವನು ಸಂಶಯಾಕುಲಿತನಾಗುತ್ತಾನೆ. ಆದ ಕಾರಣ ದೈವೀವಾಣಿಯನ್ನು ಪ್ರತಿಫಲಿಸದೆ, ಜೀವನವನ್ನೆಲ್ಲ ಹೀಗೆ ಹಾಳುಮಾಡಿಕೊಳ್ಳುತ್ತಾನೆ. (ಮರು ಮೊ. 7)

## ಅಹಂಕಾರ

ಒಳಗಿನ ಅಹಂಕಾರವನ್ನು ಪತ್ತೆ ಹಚ್ಚುವಾತ ಮೋಕ್ಷದ್ವಾರವನ್ನು ಸಾರುತ್ತಾನೆ. (ಅದೇ)

ಅಹಂಕಾರ, ದುರಾಶೆ, ಸ್ವೇಚ್ಛೆಗಳಿಂದ ಉನ್ಮತ್ತಳಾಗಿ ಆಕೆ ಮಾಯಾಮಗ್ನಳಾಗಿದ್ದಾಳೆ. ಆದರೆ ಅರಿಯದ ವಧು ಈ ರೀತಿಯಲ್ಲಿ ತನ್ನ ಸಂಗಾತಿಯನ್ನು ಕಂಡುಕೊಳ್ಳುವುದಿಲ್ಲ. (ತಿಲಂಗ ಮೊ. 4)

ಅಹಂಕಾರಿಗಳು ಹುಚ್ಚರಂತೆ ಸಂಶಯದಿಂದ ನವೆಯುತ್ತಾರೆ.
(ಬಿಲವಲ್. ಮೊ. 4)

ದೇಹ, ಸಂಪತ್ತು, ಹೆಣ್ಣು-ಇವುಗಳ ಮೇಲಿನ ಪ್ರೀತಿಯೆಲ್ಲ ಅಹಂಕಾರದ ಅಭಿವ್ಯಕ್ತಿ ; ಆದರೆ ಭಗವನ್ನಾಮ ವಿನಾ ಬೇರಾವುದೂ ಮನುಷ್ಯನೊಡನೆ ಹೋಗದು. (ಬಿಲವಲ್. ಮೊ. 2)

ಪವಿತ್ರ ಗ್ರಂಥವನ್ನು ಉಚ್ಚರಿಸಲಿ ಅಥವಾ ಗಟ್ಟಿಯಾಗಿ ಇತರರಿಗೆ ಓದಿ ಹೇಳಲಿ—ಹೇಗೆ ಮಾಡಿದರೂ ಅಹಂಕಾರದ ಮೂಲಕ ದೈವಸಾಕ್ಷಾತ್ಕಾರ ಅಶಕ್ಯ. (ರಾಮಕಲಿ. ಮೊ. 6)

ಯಾರನ್ನೂ ನಿಂದಿಸದಿರಿ ಅಥವಾ ಪ್ರಚೋದಿಸದಿರಿ : ಏಕೆಂದರೆ, ಹೀಗೆ ನಡೆದುಕೊಳ್ಳುವ ಅಹಂಕಾರಿ ಕುರುಡ ಮತ್ತು ಅಜ್ಞಾನಿ.

(ರಾಮಕಲಿ. ಮೊ. ದಖನಿ ಓಂಕಾರ್ 13)

ಸಂತೃಪ್ತಿ, ಸಮಚಿತ್ತತೆಗಳ ಮನೆಯಲ್ಲಿ ವಾಸಿಸುವ ವ್ಯಕ್ತಿ ಅಹಂಕಾರದ ದುರ್ಗುಣದಿಂದ ಮುಕ್ತನಾಗುತ್ತಾನೆ. (ರಾಮಕಲಿ. ಮೊ. ಸಿದ್ಧಗೋಷ್ಠಿ)

ಅಹಂಕಾರವಳಿದಾಗ ಮನುಷ್ಯ ಸರ್ವಜ್ಞನಾಗುತ್ತಾನೆ. (ಅದೇ)

ವ್ಯಷ್ಟಿಪ್ರಜ್ಞೆಯ ಮೂಲಕ ಜಗತ್ತು ಅಸ್ತಿತ್ವಕ್ಕೆ ಬಂತು. (ಅದೇ)

ಗುರುವನ್ನು ಸಂಧಿಸದಿದ್ದಲ್ಲಿ ಅಹಂಕಾರದ ಹೊಗೆ ಆವರಿಸುತ್ತದೆ.

(ಅದೇ)

ದೇವ-ಮಾನವ ತನ್ನ ಅಹಂಕಾರವನ್ನು ಸ್ತಂಭಿಸಿ ಮನವನ್ನು ಗೆಲ್ಲುತ್ತಾನೆ.

(ಅದೇ)

ಓ ಅಹಂಕಾರವೇ, ನಮ್ಮ ಆಗಮನ ನಿರ್ಗಮನಗಳ ಹೇತುವೇ, ಓ, ಪಾಪದ ಆತ್ಮವೇ ! (ಅದೇ)

ಅಹಂಕಾರ ವಿಮುಕ್ತ ಮಾತ್ರ ಜೀವನ್ಮುಕ್ತನಾಗುತ್ತಾನೆ.

(ಮರು ಮೊ.)

ಅಹಂಕಾರ ಮಮಕಾರಮಗ್ನತೆಯಿಂದ ವ್ಯಕ್ತಿ ಆಶಾಚೋದಿತನಾಗುತ್ತಾನೆ. ಆದರೆ (ಮಾಯಾ) ವಿಷ ಹಾಗೂ ಧೂಳಿ ವಿನಾ ಮತ್ತೇನನ್ನು ಅವನು ಕೊಂಡೊಯ್ಯುತ್ತಾನೆ ? (ಮರು ಮೊ. 10)

ಸಾಯುವವ ಯಾರು ? ನಾಶ ಮಾಡುವವ ಯಾರು ? ಬಂದು ಹೋಗುವವ ಯಾರು ? ಪ್ರಜ್ಞೆಯನ್ನು ದೇವರಲ್ಲಿ ಐಕ್ಯಗೊಳಿಸಿ ಆನಂದ ಪಡೆಯುವವರು ಯಾರು ? ಅಹಂಕಾರದಿಂದಲೇ ವ್ಯಕ್ತಿ ಸಾಯುತ್ತದೆ ; ಮಮಕಾರ ನಾಶಮಾಡುತ್ತದೆ ; ವಾಯು ಪ್ರವಾಹವೆ ಉಕ್ಕಿ ಮುನ್ನೂಕುತ್ತದೆ. ಆದರೆ ವ್ಯಕ್ತಿಯ ಮನಸ್ಸು ಭಗವನ್ನಾಮ ವ್ಯಾಪ್ತವಾದಾಗಲೆ ಹಂಬಲ ತಣಿಯುತ್ತದೆ. (ಶ್ಲೋಕ ಮೊ. ವರ್ ಮರು 3)

ಅಹಂಕಾರವಿದ್ದಲ್ಲಿ ನೀನಿರುವುದಿಲ್ಲ; ನೀನು ನನ್ನೊಳಗಿದ್ದಾಗ 'ನಾನು' ಇರುವುದಿಲ್ಲ. (ಶ್ಲೋಕ ಮೊ. ವರ್ ಮರು 3)

ಲೋಕದ ಭೇದಗಳಿಗೆ ಅಹಂಕಾರವೇ ಕಾರಣ.
(ರಾಮಕಲಿ. ಮೊ. ಸಿದ್ಧಗೋಷ್ಠಿ)

## ಇಂದ್ರಿಯಗೋಚರ ವಿಷಯಗಳು

ಐಶ್ವರ್ಯ ಮತ್ತು ಸೌಂದರ್ಯ ಮರದ ನೆರಳಿನ ಹಾಗೆ.
(ಧನಶ್ರೀ ಛಂತ್ ಮೊ. 3)

ಜಗತ್ತೊಂದು ನಶ್ವರ ಭ್ರಮೆ; ಓ ಮನವೇ, ಈ ಸತ್ಯವನ್ನು ಆವಾಹಿಸು.
(ರಾಮ್‌ತಿಲಂಗ್. ಮೊ. 1)

ಜಗತ್ತು ಸಮುದ್ರದ ತೆರೆಗಳ ಹಾಗೆ, ಮಿಂಚಿನ ಸೆಳಕಿನ ಹಾಗೆ. ಅದು ಬಂದಕೂಡಲೆ ಮರಳುತ್ತದೆ. (ಆಸ ಮೊ. ಛಂತ್ 5)

ಕಣ್ಣು ಹರಿಸಿದ ಕಡೆ ಸೃಷ್ಟಿಯಲ್ಲಿ ವಸ್ತು-ಚೈತನ್ಯಗಳ ಮಿಲನ ಕಂಡು ಬರುತ್ತದೆ; ಅದನ್ನು ಪ್ರಭುವಾದ ಭಗವಂತ ವ್ಯಾಪಿಸಿದ್ದಾನೆ.
(ಶ್ರೀರಾಗ ಮೊ.. 4:18)

ಸತ್ಯದಿಂದ ವಾಯು ಬಂತು, ವಾಯುವಿಂದ ಜಲ ಬಂತು; ಜಲದಿಂದ ಮೂರು ಲೋಕಗಳೂ ಹೊಮ್ಮಿದುವು; ಆ ಭಗವಂತ ಎಲ್ಲವನ್ನೂ ವ್ಯಾಪಿಸಿ ದನು. (ಶ್ರೀರಾಗ ಮೊ. 3:15)

ಪ್ರಪಂಚವೊಂದು ಆಟದಂತೆ, ಕನಸಿನಂತೆ: ಆಟ ಕ್ಷಣದಲ್ಲಿ ಮುಗಿಯು ತ್ತದೆ. (ಶ್ರೀರಾಗ ಮೊ. 3:11)

ಎಂತಹ ಸ್ಥಳ ಈ ಜಗತ್ತು? ಅದು ಸ್ಥಾಯಿಯಾಗಿದ್ದಲ್ಲಿ ನಿಜವಾದ ಆವಾಸವಾಗುತ್ತಿತ್ತು. (ಶ್ರೀರಾಗ, ಅಷ್ಟಪದಿ 1:17)

ಆಕಾಶ ಭೂಮಿಗಳು ಅದೃಶ್ಯವಾಗುತ್ತವೆ, ಒಬ್ಬನೇ ಒಬ್ಬ ಉಳಿಯು ತ್ತಾನೆ. ಸೂರ್ಯ ಮತ್ತು ದಿವಸ, ಚಂದ್ರ ಮತ್ತು ರಾತ್ರಿ, ಲಕ್ಷಾಂತರ ನಕ್ಷತ್ರ ಗಳು ಮರೆಯಾಗುತ್ತವೆ ; ಆದರೆ ದೇವನ ಆವಾಸ ಚಿರಂತನವಾಗಿ ಉಳಿದು ಕೊಳ್ಳುತ್ತದೆ. (ಅದೇ)

ಬದುಕಿನ ಬೆಳೆ ಪಕ್ವವಾದಾಗ, ಅದು ಸಶಬ್ದವಾಗಿ ಬಿರಿದು ನಾಶವಾಗು ತ್ತದೆ ; ಹೀಗಿರುವಾಗ ಕೇವಲ ಆಗಮನ ನಿರ್ಗಮನಗಳ ವಿಷಯದಲ್ಲಿ ಹೆಮ್ಮೆಯಿಂದಿರುವುದೆಂತು ? (ಶ್ರೀರಾಗ ಮೊ. ಪಹ್ರ 4:2)

ನಿನ್ನ ಲೋಕಗಳು ಸತ್ಯ, ನಿನ್ನ ವಿಶ್ವಗಳು ಸತ್ಯ, ನಿನ್ನ ಪ್ರಾಂತಗಳು ಸತ್ಯ, ನೀನು ಸೃಷ್ಟಿಸಿದ ಆಕೃತಿ ಸತ್ಯ. (ಆಸ ಮೊ. ವರ್ ಶ್ಲೋಕ ಮೊ.)

ಜಗತ್ತು ಸತ್ಯನ ಆವಾಸ, ಅದರಲ್ಲಿ ಸತ್ಯ ನೆಲೆಗೊಂಡಿದ್ದಾನೆ. (ಅದೇ)

ಜೀವಜಗತ್ತನ್ನು ಸೃಜಿಸಿ, ಅದರೊಳಗೆ ತನ್ನ ನಾಮವನ್ನು ನೆಟ್ಟು, ಭಗವಂತ ಅದನ್ನು ತನ್ನ ಶಾಶ್ವತ ಶಾಸನದ ಅಭಿವ್ಯಕ್ತಿಯನ್ನಾಗಿ ಮಾಡಿ ದನು, ನಾನಕ್. (ಆಸ ಮೊ. ವರ್)

ನನ್ನೊಳಗೆ ಇಡೀ ಜಗತ್ತು ಬಿಂಬಿತವಾಗಿರುವುದನ್ನು ಗುರುಕೃಪೆಯಿಂದ ಕಾಣುತ್ತಿದ್ದೇನೆ ; ಸಮಚಿತ್ತಸ್ಥನಾಗಿ ಅದರೊಡನೆ ನಾನು ಸತ್ಯದಲ್ಲಿ ವ್ಯವ ಹರಿಸುತ್ತೇನೆ. (ರಾಮಕಲಿ ಮೊ. ಸಿದ್ಧಗೋಷ್ಠಿ)

ಅವ್ಯಕ್ತಸ್ವರೂಪದ ತನ್ನಿಂದಲೇ ಆ ಶುದ್ಧನು ವ್ಯಕ್ತನಾದನು ; ನಿರ್ವಿಕಲ್ಪ ದಿಂದ ಅವನು ಸವಿಕಲ್ಪನಾದನು. (ಅದೇ)

ನಮ್ಮ ಪರಮಾತ್ಮ ದೇವಮಾನವನಿಗಾಗಿ ಭೂಮಿಯನ್ನು ಸ್ಥಾಪಿಸಿದನು. (ಅದೇ)

ಸೌಂದರ್ಯ ಮತ್ತು ಚಕ್ರಾಧಿಪತ್ಯ ಕೆಲವೇ ದಿವಸ ಉಳಿಯುತ್ತವೆ ; ಆದರೆ ಭಗವನ್ನಾಮದಿಂದ ಅನುಗೃಹೀತನಾಗುವ ವ್ಯಕ್ತಿಯ ಆಂತರಿಕ ತಮಸ್ಸು ಕಳೆದು ಬೆಳಗಾಗುತ್ತದೆ. (ಬಿಲವಲ್. ಮೊ. 3)

ಜಗತ್ತು ಚತುಷ್ಪಾದಿಯಂತೆ: ಅಹಂಕಾರವೆ ಕಟುಕ. ಪ್ರಭು ಸೃಷ್ಟಿಯನ್ನು ಸೃಷ್ಟಿಸಿ, ಅದನ್ನು ತನ್ನಿಚ್ಛೆಗೆ ಬಿಟ್ಟಿದ್ದಾನೆ.

(ರಾಮಕಲಿ. ಮೊ. ದಖನಿ ಓಂಕಾರ್ 18)

ಜಗತ್ತು ವ್ಯಷ್ಟಿ ಪ್ರಜ್ಞೆಯ ಮೂಲಕ ಅಸ್ತಿತ್ವಕ್ಕೆ ಬರುತ್ತದೆ; ಭಗವನ್ನಾಮವನ್ನು ತೊರೆದ ಅದು ಸಂಕಟಕ್ಕೊಳಗಾಗುತ್ತದೆ.

(ರಾಮಕಲಿ. ಮೊ. ಸಿದ್ಧಗೋಷ್ಠಿ 68)

ಈ ಜಗತ್ತು ಆಸೆಯ ಆವಾಸ; ಅದರ ನಿವಾಸಿಗಳು ಅಹಂಕಾರದಗ್ಧರಾಗುತ್ತಾರೆ. (ಮರು. ಮೊ 11)

ಜಗತ್ತಿನ ಹುಲ್ಲುಗಾವಲಿನಲ್ಲಿ ಮನುಷ್ಯ ಕೆಲವೇ ದಿವಸ ಹಾದು ಹೋಗುತ್ತಾನೆ ಮತ್ತು ಅಂಧಕಾರಾವೃತನಾಗಿ ಕ್ರೀಡಿಸುತ್ತಾನೆ; ಡೊಂಬನಂತೆ ತನ್ನ ಪಾತ್ರವನ್ನು ನಟಿಸುತ್ತಾನೆ; ಸ್ವಪ್ನದಲ್ಲೆಂಬಂತೆ ಕನವರಿಸುತ್ತಾನೆ. (ಮರು. ಮೊ 1:3)

ಪರ್ಶಿಯನ್ ಚಕ್ರದ ಸರಪಣಿಗೆ ತೂಗುಹಾಕಿದ ತೊಟ್ಟಿಗಳು ಪರಿಭ್ರಮಿಸುವಾಗ ಒಂದು ಖಾಲಿಯಾಗಿ ಮತ್ತೊಂದು ತುಂಬಿಕೊಳ್ಳುವಂತೆ ನಮ್ಮ ದೇವನ ಲೀಲೆ ನಡೆದಿದೆ; ತನ್ನ ಅದ್ಭುತ ಕೀರ್ತಿಗನುಸಾರವಾಗಿ ಅವನು ನಟಿಸುತ್ತಾನೆ. (ಪ್ರಭಾತಿ. ಮೊ 2)

ಜಗತ್ತು ಮಣ್ಣಿನಂತೆ! ಮಣ್ಣಿನಲ್ಲಿ ವ್ಯವಹರಿಸುವವರು ಬೂದಿಯನ್ನು ಗಳಿಸುತ್ತಾರೆ. ದೇಹವೂ ಮಣ್ಣೇ. ಏಕೆಂದರೆ ಆತ್ಮ ಹಾರಿಹೋದಾಗ ಮನುಷ್ಯ ಮಣ್ಣಿನಲ್ಲಿ ಹೊರಳುತ್ತಾನೆ. (ಶ್ಲೋಕ. ಮೊ ವರ್ಸ್. ಸಾರಂಗ 4, 2)

## ಶಕುನಗಳು

ಮನುಷ್ಯ ಶುಭದಿವಸಗಳ ಲೆಕ್ಕವಿಡುತ್ತಾನೆ; ಆದರೆ ನಮ್ಮ ಪರಮಾತ್ಮನಾದ ಭಗವಂತ ಇವುಗಳಿಗೆಲ್ಲ ಅತೀತನೆಂಬುದನ್ನು ಗಣಿಸುವುದಿಲ್ಲ.

(ರಾಮಕಲಿ. ಮೊ 6)

## ಆದಿ

ಅನಂತಕಾಲದವರೆಗೆ ಅವ್ಯವಸ್ಥೆಯಲ್ಲದೆ ಮತ್ತೇನೂ ಇರಲಿಲ್ಲ; ಭೂಮಿಯಾಗಲಿ ಆಕಾಶವಾಗಲಿ ಇರಲಿಲ್ಲ; ಅನಂತಸಂಕಲ್ಪ ಮಾತ್ರ ಇತ್ತು. ರಾತ್ರಿಯಾಗಲಿ ಹಗಲಾಗಲಿ ಸೂರ್ಯನಾಗಲಿ ಚಂದ್ರನಾಗಲಿ ಇರಲಿಲ್ಲ. ದೇವರು ಪೂರ್ಣಸಮಾಧಿಯಲ್ಲಿದ್ದ. ಸೃಷ್ಟಿಯ ಅಥವಾ ಮಾತಿನ ನಾಲ್ಕು ಆಕರಗಳಿರಲಿಲ್ಲ; ವಾಯು, ಜಲ, ಹುಟ್ಟು, ಸಾವು, ಆಗಮನ, ನಿರ್ಗಮನ, ಲೋಕ ವಿಭಾಗಗಳು, ಅಧೋಲೋಕ, ಸಪ್ತಸಮುದ್ರಗಳು, ತೊರೆಗಳು, ನದಿಗಳು—ಯಾವುದೂ ಇರಲಿಲ್ಲ. ಆಕಾಶ, ಭೂಮಿ, ಜಗತ್ತು, ಅಧೋಲೋಕ, ಮೃತ್ಯು ಅಥವಾ ಕಾಲ, ಅಸ್ತಿತ್ವ ಅಥವಾ ಆಗುವಿಕೆ, ಸ್ವರ್ಗ ಅಥವಾ ನರಕ—ಯಾವುದೂ ಇರಲಿಲ್ಲ. ಬ್ರಹ್ಮ ವಿಷ್ಣು ಶಿವ—ಯಾರೂ ಇರಲಿಲ್ಲ. ಪರಮಪುರುಷನಲ್ಲದೆ ಅನ್ಯರಿರಲಿಲ್ಲ. ಹೆಣ್ಣಾಗಲಿ ಗಂಡಾಗಲಿ ಜಾತಿಯಾಗಲಿ ಸ್ಥಳವಾಗಲಿ ಸುಖವಾಗಲಿ ದುಃಖವಾಗಲಿ ಇರಲಿಲ್ಲ. ಬ್ರಹ್ಮಚಾರಿಗಳಾಗಲಿ ದಾನಿಗಳಾಗಲಿ ಪ್ರವೀಣರಾಗಲಿ ಅನ್ವೇಷಕರಾಗಲಿ ಭೋಗಿಗಳಾಗಲಿ ಯೋಗಿಗಳಾಗಲಿ ಜಂಗಮರಾಗಲಿ 'ನಾಥ'ರಾಗಲಿ ಯಾವುದೇ ಪಂಥವಾಗಲಿ ಇರಲಿಲ್ಲ. ಜಪತಪ ಆತ್ಮಸಂಯಮಗಳನ್ನಾಚರಿಸುವವರಾಗಲಿ ಪೂಜಾರಿಗಳಾಗಲಿ ಉಪವಾಸಿಗಳಾಗಲಿ ಇರಲಿಲ್ಲ. 'ಮತ್ತೊಬ್ಬರೂ ಇದ್ದಾರೆ' ಎಂದು ಹೇಳಲು ಸಹ ಯಾರೂ ಇರಲಿಲ್ಲ. ಸ್ವಾಮಿಯೊಬ್ಬನೇ ಪೂರ್ಣಾನಂದದಲ್ಲಿದ್ದನು. (ಮರು. ಮೊ 15)

## ಚತುರ್ಯುಗಗಳು

ನಾನಕ್ : ಚೈತನ್ಯಾತ್ಮಕವಾದ ಮಾನವಶರೀರಕ್ಕೆ ರಥ ಮತ್ತು ಸಾರಥಿಗಳುಂಟು. ಯುಗಯುಗಕ್ಕೂ ಅವು ಬದಲಾಗುತ್ತವೆ; ಅದನ್ನು ಜ್ಞಾನಿಗಳು ಬಲ್ಲರು. ಸತ್ಯಯುಗದಲ್ಲಿ ಸಂತೃಪ್ತಿಯೆ ರಥ, ಧರ್ಮವೆ ಸಾರಥಿ.

ತ್ರೇತಾಯುಗದಲ್ಲಿ ಬ್ರಹ್ಮಚರ್ಯವೆ ರಥ, ಅಧಿಕಾರ ಅದನ್ನು ನಡೆಸುತ್ತದೆ. ದ್ವಾಪರಯುಗದಲ್ಲಿ ತಪವೇ ರಥ, ದಾನ ಅದಕ್ಕೆ ಚೋದಕ. ಕಲಿಯುಗದಲ್ಲಿ ರಥ ಬೆಂಕಿಯದು, ಅದನ್ನು ಅಸತ್ಯ ಮುನ್ನಡೆಸುತ್ತದೆ. (ಅಸ. ಮೊ. ವರ್)

## ಸ್ತ್ರೀ

ಸ್ತ್ರೀಯಿಂದಲೇ ನಮ್ಮ ಹುಟ್ಟು, ಅವಳ ಗರ್ಭದಲ್ಲಿ ನಾವು ಅಂಕುರಿಸುತ್ತೇವೆ. ಸ್ತ್ರೀಯೊಡನೆ ನಮ್ಮ ಲಗ್ನ ನಿಷ್ಕರ್ಷೆಯಾಗುತ್ತದೆ, ಅವಳನ್ನು ನಾವು ವರಿಸುತ್ತೇವೆ. ಸ್ತ್ರೀ ನಮ್ಮ ಗೆಳತಿ, ಸ್ತ್ರೀಯಿಂದಲೇ ಕುಟುಂಬ; ಸ್ತ್ರೀಯ ಮೂಲಕವೇ ನಮ್ಮ ಲೋಕಸಂಬಂಧ. ರಾಜ ಮೊದಲುಗೊಂಡು ಸರ್ವರಿಗೂ ಜನ್ಮಕೊಡುವ ಸ್ತ್ರೀಯನ್ನು ಅನಿಷ್ಟವೆಂದು ಕರೆಯುವುದೇಕೆ? ಸ್ತ್ರೀಯಿಂದಲೇ ಸ್ತ್ರೀ; ಸ್ತ್ರೀಯಿಲ್ಲದೆ ಯಾರೂ ಇರುವುದಿಲ್ಲ, ಭಗವಂತ ವಿನಾ.

(ಅಸ. ಮೊ. ವರ್)

## ಮನೆವಾರ್ತೆ

ಜಗತ್ತಿನ ಅಶುದ್ಧಿಗಳ ನಡುವೆ, ಶುದ್ಧನಲ್ಲಿ ನೆಲೆಗೊಳ್ಳುವವನು ನಿಜವಾದ ಯೋಗಮಾರ್ಗವನ್ನೈದುತ್ತಾನೆ. (ಸುಹಿ ಮೊ)

ತಾವರೆ ನೀರಿನಲ್ಲಿ ನಿರ್ಲಿಪ್ತವಾಗಿ ವಾಸಿಸುವಂತೆ ಅಥವಾ ಬಾತು ಪ್ರವಾಹದಲ್ಲಿ ಬದುಕುವಂತೆ ಮನುಷ್ಯ ಜಗತ್ತಿನಲ್ಲಿ ಬಾಳಬೇಕು.

(ರಾಮಕಲಿ. ಮೊ. ಸಿದ್ಧಗೋಷ್ಠಿ)

## ದೇಹಾಂತರ

ಗುರುಕೃಪೆಯಿಲ್ಲದಿದ್ದಲ್ಲಿ ಆಗಮನ ನಿರ್ಗಮನಗಳಾಗುತ್ತವೆ.

(ರಾಮಕಲಿ. ಮೊ ಸಿದ್ಧಗೋಷ್ಠಿ)

ನಿಜವಾದ ಬದುಕಿನಿಂದ ಸತ್ಯವನ್ನು ಕಂಡು ಗುರುವಿನ ಜ್ಞಾನವನ್ನು ಪಡೆಯುವವರು ಹುಟ್ಟುವುದಿಲ್ಲ ಅಥವಾ ಸಾಯುವುದಿಲ್ಲ. ಅವರ ಆಗಮನ ನಿರ್ಗಮನಗಳು ಅಂತ್ಯಗೊಳ್ಳುತ್ತವೆ. (ಶ್ರೀರಾಗ ಮೊ. 4 : 14)

ದೇವಮಾನವ ತನ್ನಿಚ್ಛೆಯಂತೆ ಬಂದುಹೋಗುತ್ತಾನೆ.

(ರಾಮಕಲಿ. ಮೊ)

ಅಹಂಕಾರ ಬಂಧನದಿಂದ ನಾವು ಮೇಲಿಂದ ಮೇಲೆ ಗರ್ಭವನ್ನು ಹೊಗ ಬೇಕಾಗುತ್ತದೆ (ಅಸ. ಮೊ. ವರ್. ಶ್ಲೋಕ 2)

ಓ ಅಹಂಕಾರವೇ, ನಮ್ಮ ಆಗಮನ ನಿರ್ಗಮನಗಳ ಹೇತುವೆ ! ಪಾಪದ ಆತ್ಮವೇ ! (ರಾಮಕಲಿ. ಮೊ. ಸಿದ್ಧಗೋಷ್ಠಿ)

ಮಾನವಜನ್ಮ ಅಮೂಲ್ಯವಾದದ್ದು. ದೈವೋನ್ಮುಖರಾದವರು ಮಾತ್ರ ಅದನ್ನು ಪಡೆಯುತ್ತಾರೆ. (ಸುಹಿ. ಮೊ. ಕಫಿ 3)

## ಮನಸ್ಸು

ನಿಮ್ಮ ಮನಸ್ಸಿನಲ್ಲಿ ಮುತ್ತು ರತ್ನ ಹವಳ ವಜ್ರಗಳಿವೆ !

(ಶ್ರೀರಾಗ ಮೊ 4 ; 21)

ಜ್ಞಾನಿ ಎಂಥವನು ? ತನ್ನನ್ನು ತಾನರಿತವನು ನಿಜವಾದ ಜ್ಞಾನಿ

(ಶ್ರೀರಾಗ ಮೊ. 4 : 30)

ನಿಮ್ಮ ಮನಸ್ಸು ಅಶುದ್ಧವಾಗಿದ್ದರೆ, ನಿಮ್ಮ ದೇಹ ನಾಲಗೆಗಳೂ ಅಶುದ್ಧವಾಗಿರುತ್ತವೆ. (ಶ್ರೀರಾಗ ಅಷ್ಟಪದಿ. ಮೊ 1 : 5)

ಓ ನನ್ನ ಚಿತ್ತವೆ, ಮೀನು ನೀರನ್ನು ಪ್ರೀತಿಸುವಂತೆ ನಿನ್ನ ಪ್ರಭುವನ್ನು ಪ್ರೀತಿಸು. ನೀರು ಹೆಚ್ಚಾದಷ್ಟೂ ಅವಳು ಆನಂದಿಸುತ್ತಾಳೆ; ಅವಳ ದೇಹ ಮನಸ್ಸುಗಳು ಶಾಂತಿಗೊಳ್ಳುತ್ತವೆ. ಓ ನನ್ನ ಚಿತ್ತವೆ, ಚಾತಕಪಕ್ಷಿ ಮಳೆಯನ್ನು ಪ್ರೀತಿಸುವಂತೆ ನಿನ್ನ ಪ್ರಭುವನ್ನು ಪ್ರೀತಿಸು; ಎಲ್ಲ ಕೊಳಗಳೂ ತುಂಬಿ ತುಳುಕುತ್ತಿವೆ, ಭೂಮಿ ಹಸುರಾಗಿದೆ; ಆದರೆ ಆ ಹಕ್ಕಿ ಶುಭಾಸ್ಪದವಾದ ಹನಿಗಾಗಿಯೆ ಕಾಯುತ್ತದೆ. ಓ ನನ್ನ ಚಿತ್ತವೆ, ನೀರು ಹಾಲನ್ನು ಪ್ರೀತಿಸುವಂತೆ ನಿನ್ನ ಒಡೆಯನನ್ನು ಪ್ರೀತಿಸು. ಅದು ಉಷ್ಣವನ್ನು ಸಹಿಸಿಕೊಳ್ಳುತ್ತದೆ; ಹಾಲನ್ನು ರಕ್ಷಿಸುತ್ತದೆ. (ಶ್ರೀರಾಗ. ಅಷ್ಟಪದಿ ಮೊ 1 : 5)

ಹೂಜಿ ನೀರನ್ನು ತುಂಬಿಕೊಂಡಿದೆ, ಆದರೆ ನೀರಿಲ್ಲದೆ ಹೂಜಿಯನ್ನು ರೂಪಿಸುವುದು ಸಾಧ್ಯವೆ? ಜ್ಞಾನ ಮನಸ್ಸನ್ನು ಹಿಡಿದಿಟ್ಟಿದೆ, ಆದರೆ ಗುರುವಿನ ಜ್ಞಾನವಿಲ್ಲದೆ ಮನವನ್ನೆಂತು ಒಗ್ಗೂಡಿಸಬಹುದು? (ಅಸ. ಮೊ. ವರ್)

ಮನಸ್ಸು ತನಗೆ ತಾನೆ ಅಪರಿಚಿತವಾದಲ್ಲಿ, ಇಡೀ ಜಗತ್ತೇ ಅದರಿಂದ ಬೇರ್ಪಡುತ್ತದೆ! (ಸುಹಿ. ಮೊ 5)

ಚಿತ್ತ ಪರಾಚಿತ್ತದಿಂದ ಸಂತೃಪ್ತಿಗೊಂಡಾಗ, ಅಹಂಕಾರವಳಿದು ಬಹಿರ್ಗಮನ ನಿಲ್ಲುತ್ತದೆ. (ಗೌರಿ ಮೊ)

ಮನಸ್ಸನ್ನು ನಿರ್ಬೀಜ ಸಮಾಧಿಯಲ್ಲಿ ಹಿಡಿದಿಟ್ಟಲ್ಲಿ ಹಂಸ ಹೊರಗೆ ಹಾರುವುದಿಲ್ಲ ಅಥವಾ ಕಾಲದ ಗೋಡೆ ಬೀಳುವುದಿಲ್ಲ.
(ರಾಮಕಲಿ. ಮೊ. ಸಿದ್ಧಗೋಷ್ಠಿ)

ದೇಹವೇ ಉಗ್ರಾಣ, ಮನವೇ ಅದರ ವ್ಯಾಪಾರಿ; ಸಮಸ್ಥಿತಿಯಲ್ಲಿರುವ ಮನವೇ ಸತ್ಯದಲ್ಲಿ ವ್ಯವಹರಿಸುತ್ತದೆ. (ಅದೇ)

ಮಾನವ ದೇಹವಾಗಲಿ ಹೃದಯವಾಗಲಿ ಇಲ್ಲದಿದ್ದಾಗ ಮನಸ್ಸು ಪರಮ ಪ್ರಭುವಿನಲ್ಲಿ ನಿರ್ಲಿಪ್ತತೆಯಿಂದ ನೆಲೆಗೊಂಡಿತ್ತು. (ಅದೇ)

ದೇವ ಮಾನವ ತನ್ನ ಅಹಂಕಾರವನ್ನು ಸ್ತಂಭಿಸಿ ಮನಸ್ಸನ್ನು ಗೆಲ್ಲುತ್ತಾನೆ. (ಅದೇ)

ಮನಸ್ಸು ನಡೆಸಿದಂತೆ ಮನಸ್ಸು ಹೋಗುತ್ತದೆ. ಈ ಮನಸ್ಸು ಒಮ್ಮೆ ಪುಣ್ಯಕ್ಕೆ, ಒಮ್ಮೆ ಪಾಪಕ್ಕೆ ಕರೆದೊಯ್ಯುತ್ತದೆ. (ಬಿಲವಲ್. ಮೊ ೨)

ಮನುಷ್ಯ ಮನವನ್ನು ಸಂಯಮಿಸಿ, ಎಂಟು ಚಿತ್ತಶಕ್ತಿಗಳನ್ನು ಅರ್ಜಿಸಿ, ಕರ್ಮಗಳ ಮೂಲಕ ನಿರ್ಲಿಪ್ತಸತ್ಯನನ್ನು ಧ್ಯಾನಿಸಿ, ವಾಯು ಜಲಾಗ್ನಿಗಳಿಂದ ಹುಟ್ಟುವ ತನ್ನ ರಸಗಳನ್ನು ತ್ಯಜಿಸಿದಾಗ ಅವನ ಹೃದಯದೊಳಗೆ ಶುದ್ಧ ಸತ್ಯನಾಮ ನೆಲೆಗೊಳ್ಳುತ್ತದೆ; ಬಳಿಕ ಮನಸ್ಸು ಅದಕ್ಕೆ ಅಳವಡುತ್ತದೆ; ಆ ವ್ಯಕ್ತಿಯನ್ನು ಸಾವು ಕಬಳಿಸದು. (ಬಿಲವಲ್. ಮೊ. ಥಿತಿ)

ಮನಸ್ಸು ಚಂಚಲ; ಅದನ್ನು ಹಿಡಿಯಲಾಗದು; ಅದು ಕಳ್ಳತನದಲ್ಲಿ (ಕೆಡುಕಿನ) ಹಸಿರು ರೆಂಬೆಗಳನ್ನು ತಿನ್ನುತ್ತದೆ. ದೇವನ ಚರಣಕಮಲಗಳನ್ನು ಹಂಬಲಿಸುವಾತ ಶಾಶ್ವತವಾಗಿ ಬದುಕುತ್ತಾನೆ ಮತ್ತು ಅತೀತಪ್ರಜ್ಞೆಯ ಅವಸ್ಥೆಯಲ್ಲಿ ಸದಾ ನೆಲೆಗೊಳ್ಳುತ್ತಾನೆ.
(ರಾಮಕಲಿ. ಮೊ. ದಖನಿ ಓಂಕಾರ್ ೨೩)

ದೇಹವೆ ಒಲೆ; ಅದರಲ್ಲಿ ಮನಸ್ಸಿನ ಕಬ್ಬಿಣ ಎರಕಗೊಳ್ಳುತ್ತದೆ ಮತ್ತು ಪಂಚಾಗ್ನಿಗಳಿಂದ ಕಾವುಗೊಳ್ಳುತ್ತದೆ. ಜಾಗೃತಿಯ ಇಕ್ಕುಳದಲ್ಲಿ ಹಿಡಿದು ಕೊಳ್ಳುವ ಇದ್ದಿಲುಗಳೆಂದರೆ ಪಾಪಗಳು; ಓಹ್, ಮನಸ್ಸು ದಗ್ಧವಾಗಿದೆ.
(ಮರು. ಮೊ ೩)

ಮನಸ್ಸಿನ ಸರ್ಪವನ್ನು ಬುಟ್ಟಿಯಲ್ಲಿ ಹಿಡಿದಿಟ್ಟರೆ ಅದರ ವಿಷ ಹೋಗದು.
(ಮರು. ಮೊ ೨)

ಓ ನನ್ನ ಚಿತ್ತವೆ; ಈ ಜಗತ್ತಿಗೇನು ತಂದೆ? ಏನನ್ನು ಕೊಂಡೊಯ್ಯುವೆ? ನೀನು ಸಂಶಯದಿಂದ ಬಿಡುತೆಗೊಂಡಾಗ ಮಾತ್ರ ಮುಕ್ತನಾಗುವೆ.
(ತುಖಾರಿ. ಮೊ)

ಮನಸ್ಸು ಚಂಚಲ; ಆದ್ದರಿಂದ ಅದು ದೇವರ ವ್ಯಾಪ್ತಿಯನ್ನರಿಯದು.
(ಬಸಂತ. ಮೊ ೪)

ಪಕ್ಷಿ ಆಕಾಶದಲ್ಲೆಂತೊ ಅಂತೆ, ಮನಸ್ಸು ನಿರಂತರವಾಗಿ ಮಾಯೆಯತ್ತ ಹಾರುತ್ತದೆ; ಗುರುವಾಣಿಯ ಮೂಲಕ ಒಳಗಿನ ಪಂಚಚೋರರನ್ನು ಸೋಲಿಸಿದಾಗ ಮಾತ್ರವೇ ದೇಹನಗರಿಯಲ್ಲಿ ಶಾಂತಿ ಆಳುತ್ತದೆ.

(ಪ್ರಭಾತಿ. ಮೊ 10)

## ಇಲ್ಲಿಂದ ಮುಂದೆ

ಗುರು ದೇವನೇ ರಕ್ಷೆಯಾಗಿರುವವನು ಇಲ್ಲಿಂದ ಮುಂದೆ ಪ್ರಶ್ನೆಗೊಳಗಾಗುವುದಿಲ್ಲ. (ಶ್ರೀರಾಗ. ಮೊ. ಅಷ್ಟಪದಿ 2 : 15)

ಪರಲೋಕದಲ್ಲಿ ಪುಣ್ಯಕಾರ್ಯಗಳನ್ನು ಮಾತ್ರ ಗಣಿಸಲಾಗುವುದು. ದುಷ್ಕರ್ಮಿಯನ್ನು ಥಳಿಸಲಾಗುವುದು; ಅವನು ಅಳುವನು; ಆದರೆ ಅವನ ಗೋಳಿಗೆ ಕಿವಿಗೊಡಲು ಅಲ್ಲಿ ಯಾರಿರುತ್ತಾರೆ? ಮನಸ್ಸಿನ ಕುರುಡು ಅವನ ಬದುಕನ್ನು ಹಾಳುಮಾಡಿದೆ. (ಅಸ. ಮೊ. ವರ್. ಪೌರಿ 3)

ಇನ್ನು ಮುಂದೆ ಜಾತಿ ಮತ್ತು ಅಧಿಕಾರ ಲೆಕ್ಕಕ್ಕಿಲ್ಲ; ಏಕೆಂದರೆ ಹೊಸ ವ್ಯಕ್ತಿಯೊಬ್ಬ ದೇವನ ಜಗತ್ತಿನಲ್ಲಿ ಹುಟ್ಟುವನು. ಯಾರ ಪ್ರತಿಷ್ಠೆ ಪ್ರಭುವಿನ ಗಣನೆಗೆ ಬರುವುದೋ ಅವರು ಮಾತ್ರ ಪ್ರತಿಷ್ಠಿತರು.

(ಅಸ. ಮೊ. ವರ್)

ಸಾಕ್ಷರನೊಬ್ಬ ಪಾಪಿಯಾದರೆ, ಅನಕ್ಷರಸ್ಥ ಸಂತನೊಬ್ಬನನ್ನು ಅವನ ಬದಲಾಗಿ ಶಿಕ್ಷಿಸುವುದಿಲ್ಲ. ಯಾರು ಅಕ್ಷರಸ್ಥ ಎಂಬುದನ್ನು ಪರಲೋಕದಲ್ಲಿ ಮಾತ್ರ ಗಣಿಸಬೇಕು. ತನ್ನ ಚಿತ್ತಸಂಕಲ್ಪವನ್ನು ಅನುಸರಿಸುವವನು ಅನಕ್ಷರಸ್ಥ ; ಅವನು ಇಲ್ಲಿಂದ ಮುಂದೆ ದುಃಖಭಾಜನನಾಗುವನು. (ಅದೇ)

ಮನುಷ್ಯ ತನ್ನ ಸಂಕಲ್ಪದಂತೆ ಇಲ್ಲಿ ಆಜ್ಞೆಗಳನ್ನು ವಿಧಿಸುತ್ತಾನೆ; ಆದರೆ ಅಲ್ಲಿ ಅವನದು ಇಕ್ಕಟ್ಟಾದ ದಾರಿ. ನರಕಕ್ಕೆ ಅವನನ್ನು ಬೆತ್ತಲೆಯಾಗಿ ಓಡಿಸಲಾಗುವುದು ಮತ್ತು ಭಯಗ್ರಸ್ತನನ್ನಾಗಿ ಮಾಡಲಾಗುವುದು.

(ಅದೇ)

ಇಲ್ಲಿಂದ ಮುಂದೆ ವ್ಯಕ್ತಿ ವಿಷಜ್ವಾಲೆಗಳ ಅಗ್ನಿ ಸಾಗರವನ್ನು ದಾಟಬೇಕು; ಅಲ್ಲಿ ಅವನ ಆತ್ಮ ವಿನಾ ಯಾರೂ ಸಂಗಡಿಗರಿರುವುದಿಲ್ಲ. ಅಗ್ನಿಸಾಗರ ಧಗಧಗಿಸುತ್ತದೆ; ಅದರ ಅಲೆಗಳು ಮೇಲೇಳುತ್ತವೆ; ಅಹಂಕಾರಿಯನ್ನು ಅದರಲ್ಲೆಸೆದು ಹುರಿಯಲಾಗುವುದು. (ಮರು 1 : 6)

## ಚಿಹ್ನೆ ಮತ್ತು ಸಂಕೇತಗಳು

ವಿಭುವಿನ ನಾಮಸ್ಮರಣೆಯಿಲ್ಲದಿದ್ದರೆ ಕೇಸರಿ ಚಿಹ್ನೆಯ ಅಥವಾ ಪವಿತ್ರ ದಾರದ ಉಪಯೋಗವೇನು? (ಅಸ. ಮೊ. ವರ್ ಶ್ಲೋಕ)

ಓ ಜೀವನವೇ, ವೇಷಲಾಂಛನಗಳು ಹೆಚ್ಚಿದಷ್ಟು ಶರೀರ ಸಂಕಟ ಕ್ಕೀಡಾಗುತ್ತದೆ. ಏಕೆಂದರೆ ಇವೆಲ್ಲ ನಿನ್ನ ಕರ್ಮಫಲ (ಅಸ. ಮೊ. ಶ್ಲೋಕ)

## ಸ್ವರ್ಗ ಮತ್ತು ನರಕ

ಮಿಥ್ಯಾವಾದಿಗಳಿಗೆ ಆಶ್ರಯವಿಲ್ಲ; ಅವರ ಮುಖ ಕಪ್ಪುಗಟ್ಟುತ್ತದೆ; ಅವರು ನರಕಕ್ಕೆ ಎಳೆದೊಯ್ಯಲ್ಪಡುತ್ತಾರೆ. (ಅಸ. ಮೊ. ವರ್ ಪೌರಿ 2)

ಓ ಪ್ರಭು, ನಿನ್ನ ಹೆಸರು 'ರೂಪರಹಿತ': ವ್ಯಕ್ತಿ ಅದರಲ್ಲಿ ನೆಲೆಗೊಂಡರೆ ನರಕಕ್ಕೆ ಹೋಗುವುದಿಲ್ಲ. (ಅಸ. ಮೊ. ವರ್ ಶ್ಲೋಕ)

ಸ್ವರ್ಗ ನರಕಗಳಿಗೆ ಅಹಂಕಾರವೇ ಕಾರಣ.
(ಅಸ. ಮೊ. ವರ್. ಶ್ಲೋಕ ಮೊ)

## ಯಾತ್ರೆಗಳು

ಪವಿತ್ರ ಸ್ಥಳಗಳಲ್ಲಿ ಮೀಯುವುದರಿಂದ, ಕೇವಲ ದಾನ ಜ್ಞಾನ ಶೌಚ ಕರ್ಮಗಳಿಂದ ಅವಂಚಿತನನ್ನು ವಂಚಿಸುವುದೆಂತು ಸಾಧ್ಯ? (ಸುಹಿ. ಮೊ 5)

ನೀವು ಕೆಟ್ಟ ಮನಸ್ಸಿನಿಂದ ಚೋರದೇಹದೊಡನೆ ಪವಿತ್ರ ಕ್ಷೇತ್ರಗಳಲ್ಲಿ ಮಿಾಯಲು ಹೋಗುತ್ತೀರಿ. ಒಂದು ಭಾಗ ಶುಚಿಯಾದರೆ ಇತರ ಭಾಗಗಳು ಇಮ್ಮಡಿ ಮಲಿನವಾಗುತ್ತವೆ. ಹೊರಗಿನಿಂದ ನೀವು ಕುಂಬಳಕಾಯಿಯಂತೆ ಶುದ್ಧಿಗೊಳ್ಳುತ್ತೀರಿ, ಆದರೆ ನಿಮ್ಮೊಳಗೆ ಕೇವಲ ವಿಷವಿರುತ್ತದೆ. ಸಂತ ನಾದವನು ಇಂಥ ಮಿಾಹವಿಲ್ಲದೆಯೆ ಅನುಗ್ರಹೀತನಾಗುತ್ತಾನೆ; ಕಳ್ಳ ನಾದರೊ ಮಿಂದಮೇಲೂ ಕಳ್ಳನಾಗಿಯೆ ಉಳಿಯುತ್ತಾನೆ.

(ಶ್ಲೋಕ. ಮೊ. ರಾಗ ಸುಹಿ ವರ್ 3)

## ಉಪವಾಸ ಮತ್ತು ಆಹಾರ

ಸಂತೃಪ್ತರು ತಮ್ಮ ಸ್ವಾಮಿಯನ್ನು ಸೇವಿಸುತ್ತಾರೆ ಮತ್ತು ಸತ್ ಅಲ್ಲದೆ ಮತ್ತಾರನ್ನೂ ಕುರಿತು ಚಿಂತಿಸುವುದಿಲ್ಲ. ಅವರು ಪಾಪದಲ್ಲಿ ಕಾಲಿಕ್ಕದೆ, ಒಳ್ಳೆಯದನ್ನೂ ಪವಿತ್ರವಾದುದನ್ನೂ ಆಚರಿಸುತ್ತಾರೆ. ಅವರು ತಮ್ಮ ಪ್ರಾಪಂಚಿಕ ಬಂಧನಗಳನ್ನು ಸಡಿಲಿಸಿ, ಮಿತವಾಗಿ ತಿನ್ನುತ್ತಾರೆ.

(ಅಸ. ಮೊ. ವರ್ ಪೌರಿ)

ಉಪವಾಸ ಮಾಡಿದಂತೆ ನಾಲಿಗೆಯ ರುಚಿ ಕಳೆದುಹೋಗುತ್ತದೆ; ಅನ್ಯಪ್ರೇಮದಲ್ಲಿ ವ್ಯಕ್ತಿ ಬಹು ದುಃಖಿತನಾಗುತ್ತಾನೆ. (ಅಸ. ಮೊ. ವರ್)

ಕಾಳು ದೇವರು; ಅಂತೆಯೆ ನೀರು, ಗಾಳಿ, ಬೆಂಕಿ ಮತ್ತು ಉಪ್ಪು. ಐದನೆಯ ದೇವರಾದ ತುಪ್ಪವನ್ನು ಆಹಾರದೊಡನೆ ಮಿಶ್ರಮಾಡಿದಾಗ ಅದು ಮತ್ತೂ ಶುದ್ಧವಾಗುತ್ತದೆ. (ಅಸ. ಮೊ. ವರ್. ಶ್ಲೋಕ. ಮೊ.)

ನಾವು ತಿನ್ನುವ, ಕುಡಿಯುವ ವಸ್ತುಗಳೆಲ್ಲ ಶುದ್ಧ; ಏಕೆಂದರೆ, ಭಗವಂತ ಅವುಗಳನ್ನು ನಮಗೆ ಅನುಗ್ರಹಿಸಿದ್ದಾನೆ. (ಅಸ. ಮೊ. ವರ್)

ಓ ಮಿತ್ರ, ದೇಹವನ್ನು ನೋಯಿಸುವ ಅಥವಾ ಮನಸ್ಸಿಗೆ ಪಾಪದ ಆಲೋಚನೆಗಳನ್ನು ತರುವ ಆಹಾರ ಹಾಗೂ ಭೋಗಲಾಲಸೆ ವ್ಯರ್ಥ.

(ಶ್ರೀರಾಗ. ಮೊ)

## ನಿರ್ವಾಣ

ಅವನಿಗೆ ಹಸಿವಾಗಲಿ ತೃಷೆಯಾಗಲಿ ಇಲ್ಲ; ಸ್ವಸಂತೃಪ್ತವಾದ ಮನಸ್ಸಿನಿಂದ ಅವನು ಸರ್ವವ್ಯಾಪಿಯೂ ನಿರ್ಲಿಪ್ತನೂ ಆದ ದೇವನನ್ನು ಪ್ರತಿಯೊಂದು ಹೃದಯದಲ್ಲೂ ಹುಡುಕುತ್ತಾನೆ. (ಮರು. ಮೊ. ದಖ್ನಿ)

ನೀರಿನಲ್ಲಿ ನಿರ್ಲಿಪ್ತತೆಯಿಂದಿರುವ ಕಮಲದಂತೆ, ಹೊಳೆಯಲ್ಲಿ ತೇಲುತ್ತಿರುವ ಹಂಸದಂತೆ ಮನಸ್ಸು ಭಗವನ್ನಾಮಸ್ನಾತವಾಗಿ, ದೇವೈಕಚಿತ್ತನಾಗಿ ಆಶಾಮಧ್ಯದಲ್ಲಿಯೂ ಆಶಾಮುಕ್ತನಾಗಿ ಮನುಷ್ಯ ಭವಸಾಗರವನ್ನು ದಾಟಬೇಕು. (ರಾಮಕಲಿ. ಮೊ. ಸಿದ್ಧಗೋಷ್ಠಿ)

ದೇವ ಮಾನವ ಶಾಶ್ವತವಾಗಿ ಮುಕ್ತನಾಗುತ್ತಾನೆ. (ಅದೇ)

ವ್ಯಕ್ತಿ ಮೂರು ಕೋಶಗಳನ್ನು ಮೀರಿದಾಗ ತಿನ್ನಬಾರದ್ದನ್ನು ತಿನ್ನುತ್ತಾನೆ. ಆಗ ಓ ನಾನಕ್, ತನ್ನನ್ನು ತಾನು ಬಿಡುಗಡೆಗೊಳಿಸಿಕೊಳ್ಳುವಾತ ಬಿಡುಗಡೆಗೊಳಿಸುತ್ತಾನೆ. (ಅದೇ)

ತನ್ನತನದ ಸಂವೇದನೆಯನ್ನು ಕಳೆದುಕೊಂಡು, ದಿವ್ಯವಚನಕ್ಕೆ ಸದಾ ಎಚ್ಚರವಾಗಿರುವಾತ ಮಾತ್ರ ಮುಕ್ತನಾಗುತ್ತಾನೆ. (ಅದೇ)

ನಿಜವಾದ ಗುರುವನ್ನು ಸಂಧಿಸದೆ ಮುಕ್ತಿ ದೊರೆಯದು. (ಅದೇ)

## ಮನುಷ್ಯ

ಮಾನವ ಜನ್ಮ ಅಮೂಲ್ಯವಾದುದು; ದೈವಾಭಿಮುಖರು ಮಾತ್ರ ಅದನ್ನು ಪಡೆಯುತ್ತಾರೆ. (ಸುಹಿ. ಮೊ. ಕಫಿ 1:3)

ನಾನಕ್ ಹೇಳುತ್ತಾನೆ: "ಭಗವಂತ ಸಂಕಲ್ಪಿಸಿದ್ದು ಮಾತ್ರ ನಡೆಯುತ್ತದೆ, ಏಕೆಂದರೆ ಮನುಷ್ಯನ ಕೈಯಲ್ಲಿ ಯಾವುದೂ ಇಲ್ಲ."

(ಶ್ರೀರಾಗ್. ಮೊ. ಅಷ್ಟಪದಿ 3:4)

ನಿಮ್ಮೊಳಗಿನ ದೇವಾಲಯ ಸುಂದರವಾಗಿದೆ. ಸೃಷ್ಟಿಕರ್ತ ಅದನ್ನು ಕಟ್ಟಿದ್ದಾನೆ. (ಶ್ರೀರಾಗ. ಮೊ. ಅಷ್ಟಪದಿ)

ದೇವರು ತನ್ನ ನಾಮವನ್ನು ನಮ್ಮೊಳಗೆ ನೆಟ್ಟು, ನಮ್ಮ ದೇಹವನ್ನು ತನ್ನ ಶಾಸನದ ಅಭಿವ್ಯಕ್ತಿಯನ್ನಾಗಿ ಮಾಡಿದ್ದಾನೆ. (ಅಸ. ಮೊ. ವರ್ ಪೌರಿ)

ಶಬ್ದ ಅದ್ಭುತ; ಜ್ಞಾನ ಅದ್ಭುತ; ಜೀವನ ಹಾಗೂ ಅದರ ಪ್ರಭೇದಗಳು ಅದ್ಭುತ. ರೂಪ ಅದ್ಭುತ, ವರ್ಣ ಅದ್ಭುತ, ನಗ್ನವಾಗಿ ಅಲೆಯುವ ಜಂತುಗಳು, ಮತ್ತು ಗಾಳಿ ನೀರುಗಳು ಅದ್ಭುತ; ಹಲವು ಅದ್ಭುತಗಳನ್ನೆಸಗುವ ಬೆಂಕಿ, ಭೂಮಿ, ಬದುಕನ್ನು ಮೋಹಿಸುವ ರುಚಿಗಳು, ಮಿಲನ, ವಿಯೋಗ, ಹಸಿವು, ಅನುಭವ, ಸ್ತುತಿ, ಪಥ, ನಿಕಟತೆ, ದೂರ—ಎಲ್ಲವೂ ಆಶ್ಚರ್ಯಕರ. ಅದ್ಭುತದ ಮೇಲೆ ಅದ್ಭುತವನ್ನು ಕಂಡು ನಾನು ಆಶ್ಚರ್ಯಾಭಿಭೂತನಾಗಿದ್ದೇನೆ. ಆದರೆ ಅದರ ಉತ್ತರ ಕೊನೆಯ ಗುರಿಯನ್ನವಲಂಬಿಸಿದೆ. (ಅಸ. ಮೊ. ವರ್ ಶ್ಲೋಕ)

ಎಲೈ ಅಜ್ಞಾನಿ, ಭಗವಂತನಿಗೆ ಬೇಡದಿರುವಾಗ ನಿನ್ನ ಸೌಂದರ್ಯದ ಪ್ರಯೋಜನವೇನು ? (ತಿಲಂಗ್. ಮೊ 4)

ನಿನ್ನೊಡನೆ ಬರುವ ಶರೀರ ಕೂಡ ಕಡೆಗೆ ನಿನ್ನ ಜೊತೆಗಿರುವುದಿಲ್ಲ. ನೀನು ಪ್ರೀತಿಸುವ ನಿನ್ನ ತಂದೆ, ತಾಯಿ, ಮಕ್ಕಳು, ಬಂಧುಗಳು ಎಲ್ಲರೂ ನಿನ್ನನ್ನು ಬೆಂಕಿಗೆಸೆಯುತ್ತಾರೆ—ಶರೀರದಿಂದ ಆತ್ಮ ನಿರ್ಗಮಿಸಿದಾಗ. (ತಿಲಂಗ್. ಮೊ 2)

ದೇಹವೆ ಮರ, ಮನಸ್ಸೆ ಮೊಗ್ಗು, ಐದು ಜ್ಞಾನೇಂದ್ರಿಯಗಳೆ ಜೊತೆ ಮೊಗ್ಗುಗಳು. ಅವು ಭಗವಂತನೊಡನೆ ಸೇರಿಕೊಂಡು ಅವನ ಸಾರಸತ್ವವನ್ನು ಪಡೆಯುತ್ತವಾದ್ದರಿಂದ ಬಂಧನಗೊಳ್ಳುವುದಿಲ್ಲ. ಆಸೆಯ ಬೀಜವನ್ನರಸಿಕೊಂಡು ಧಾವಿಸುವವರ ರೆಕ್ಕೆಗಳು ಕತ್ತರಣೆಗೊಳ್ಳುತ್ತವೆ. ಮತ್ತು ಅವರು ಅಪಾರ ಪಾಪದ ಬಲೆಯಲ್ಲಿ ಸಿಲುಕುತ್ತಾರೆ.

(ರಾಮಕಲಿ. ಮೊ. ದಖಿನಿ ಓಂಕಾರ್, 33)

ದೇಹವೊಂದು ಮಣ್ಣಿನ ಮುದ್ದೆ, ಮರಳಿನ ಭ್ರಾಮಕ ಗೋಡೆ; ಹೀಗಿರುವಾಗ ಎಲೈ ಮಾನವಾ, ಪ್ರಭುವಿನ ನಾಮವಿಲ್ಲದೆ ನೀನು ಪುಣ್ಯಗಳಿಸುವೆಯೆಂತು ? (ಮರು. ಮೊ 11)

## ಸಮಚಿತ್ತತೆ

ಹಂಸಸಂತರು ಮಧು ಕಾಸಾರವನ್ನು ತ್ಯಜಿಸುವುದಿಲ್ಲ ; ಪ್ರೇಮಪೂರ್ಣ ಆರಾಧನೆಯ ಮೂಲಕ ಸಮಚಿತ್ತರಾಗುತ್ತಾರೆ. (ಧನಶ್ರೀ. ಮೊ. ಅಷ್ಟಪದಿ 8)

ದೈವೀಪ್ರಜ್ಞೆಯುಳ್ಳವರು ಸಮಚಿತ್ತಸ್ಥಿತಿಯಲ್ಲಿ ಭಕ್ತಿಯ ಮೂಲಕ ಭಗವಂತನನ್ನು ಕುರಿತು ಚಿಂತಿಸುತ್ತಾರೆ. (ಧನಶ್ರೀ. ಮೊ. ಅಷ್ಟಪದಿ 8)

ಸಮಚಿತ್ತತೆಯ ಮೂಲಕ ಮಾತ್ರ ತನ್ನ ಭಗವಂತನನ್ನು ಕಾಣುತ್ತಾನೆ. ಬಳಿಕ ಅವನು ಸಾಯುವುದಿಲ್ಲ, ಬರುವುದಿಲ್ಲ ಅಥವಾ ಹೋಗುವುದಿಲ್ಲ. ಒಡೆಯನಲ್ಲಿ ಸೇವಕನಿದ್ದಾನೆ, ಸೇವಕನಲ್ಲಿ ಸ್ವಾಮಿಯಿದ್ದಾನೆ.

(ಧನಶ್ರೀ. ಮೊ. ಅಷ್ಟಪದಿ 2)

ಗುರುವಚನದ ಮೂಲಕ ವ್ಯಕ್ತಿ ಸಮಚಿತ್ತತೆಯಲ್ಲಿ ಮಗ್ನನಾಗುತ್ತಾನೆ ; ಸಮಚಿತ್ತತೆಯ ಮೂಲಕ ಪರಿಪೂರ್ಣತಾಸಾರವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಬಳಿಕ ಅವನು ಅನ್ಯಪಥವನ್ನು ತುಳಿಯುವುದಿಲ್ಲ ; ಅರಸುವವನು ಕಾಣುತ್ತಾನೆ. (ರಾಮಕಲಿ. ಮೊ. ಸಿದ್ಧಗೋಷ್ಠಿ 23)

ವ್ಯಕ್ತಿ ತನ್ನ ಮನವನ್ನು ನಿರ್ಬೀಜ ಸಮಾಧಿಯಲ್ಲಿ ಹಿಡಿದಿರಿಸಿದಲ್ಲಿ ಹಂಸ ಹೊರಗೆ ಹಾರುವುದಿಲ್ಲ ಅಥವಾ ಕಾಲದ ಭಿತ್ತಿ ಉರುಳುವುದಿಲ್ಲ.

(ರಾಮಕಲಿ. ಮೊ. ಸಿದ್ಧಗೋಷ್ಠಿ)

## ಮಾಯೆ

ಮಾಯಾಮದಿರೆಯನ್ನು ಪಾನಮಾಡಿ, ಭಗವನ್ನಾಮವನ್ನು ತೊರೆಯುವವನಿಗೆ ಎಂದೂ ಶಾಂತಿಯಿಲ್ಲ ; ಏಕೆಂದರೆ ಆನಂದ ಬರತಕ್ಕದ್ದು ಗುರುವಿನ ಪ್ರೇಮಪೂರ್ಣ ಆರಾಧನೆಯಿಂದ. ಅಂಥವನು ಹಂದಿಯಂತೆ, ಕುನ್ನಿಯಂತೆ, ಬೆಕ್ಕಿನಂತೆ, ಚತುಷ್ಪಾದಿಯಂತೆ, ಚಂಡಾಲನಂತೆ, ಅಸ್ಪೃಶ್ಯನಂತೆ.

(ಬಿಲವಲ್. ಮೊ 2)

ಒಳಗಿನ ಮಾಯೆ ಸಾಯುವುದಿಲ್ಲ ಅಥವಾ ಚಿತ್ತ ಸ್ತಂಭಿತವಾಗುವುದಿಲ್ಲ; ಆಶಾ ಸಮುದ್ರ ಮದಿರೋನ್ಮತ್ತವಾದಂತೆ ಸಹಸ್ರಾರು ಅಲೆಗಳಿಂದ ಉಬ್ಬುತ್ತದೆ. ಆದರೆ ಆಂತರಿಕ ಸತ್ಯದಿಂದ ನಿರ್ದೇಶನಗೊಂಡ ದೇಹದ ದೋಣಿ ಉಕ್ಕುವ ಕಡಲಿನ ಮೇಲೆ ಹೊಯ್ದಾಡದೆ ದಡ ಸೇರುತ್ತದೆ. (ಮರು. ಮೊ 9)

ಬೆಳ್ಳಿ ಚಿನ್ನಗಳು ಕೇವಲ ಮಾಯೆ ; ಒಂದು ದಿನ ಅವು ಮಣ್ಣಿನಲ್ಲಿ ಸೇರಿ ಹೋಗುತ್ತವೆ. (ಮರು. ಮೊ 5)

ಮಾಯೆಯ ಆರಾಧಕ ಎಂಬತ್ತನಾಲ್ಕು ಲಕ್ಷ ಜಾತಿಗಳ ನರಕದ ಮೂಲಕ ಹಾದುಹೋಗುತ್ತಾನೆ ; ಆದರೆ ತಾನು ಮಾಡಿದ ಕರ್ಮದ ಪ್ರತಿಫಲವನ್ನು ಪಡೆಯುತ್ತಾನೆ. (ಮರು. ಮೊ 8)

ಮಾಯೆಯ ಆರಾಧಕ ಭ್ರಮೆಯನ್ನು ಹಿಂಬಾಲಿಸುತ್ತಾನೆ. (ಮರು. ಮೊ 9)

ಮಾಯೆ ಮನುಷ್ಯನಿಗೆ ಅಂಟಿಕೊಂಡಾಗ ಅವನದನ್ನು ಗೆಲ್ಲಲಾರ ; ಆದರೆ ನಿಜವಾದ ಗುರು ಭಗವನ್ನಾಮವನ್ನು ಒಳಗೆ ನೆಟ್ಟು, ಅವನನ್ನು ಕಾಪಾಡಬಲ್ಲ. (ಪರಭಾ. ಮೊ)

## ಕರ್ಮ, ಸ್ವಸಂಕಲ್ಪ ಮತ್ತು ಕೃಪೆ

ಪ್ರವೃತ್ತಿಯಂತೆ ಪಥ. (ಶ್ರೀರಾಗ. ಮೊ 1:30)

ನಿನ್ನ ಕೃಪೆಯೆ ನನ್ನ ಕುಟುಂಬ. (ಶ್ರೀರಾಗ. ಮೊ 4:7)

ನಮ್ಮ ದೇಹ ಸತ್ಯದಿಂದ ಸಂತೃಪ್ತವಾಗಿದ್ದಾಗ, ಭಗವತ್ಕೃಪೆ ನಮ್ಮ ಮೇಲಿರುತ್ತದೆ. (ಶ್ರೀರಾಗ. ಮೊ 4:5)

ನಾನಕ್ : ಪ್ರಭು ಸಂಕಲ್ಪಿಸಿದರೆ, ಕಾಗೆಯನ್ನು ಹಂಸವನ್ನಾಗಿ ಪರಿವರ್ತಿಸಬಲ್ಲ. (ಶ್ರೀರಾಗ್. ವರ್. ಶ್ಲೋಕ ಮೊ)

ನಮ್ಮ ಸ್ವಂತ ಪ್ರಯತ್ನಗಳ ಮೂಲಕ ಪಡೆದುಕೊಳ್ಳುವ ಕೊಡುಗೆಯಿಂದೇನು ಪ್ರಯೋಜನ ? ನಾನಕ್ : ಪ್ರಭು ಕರುಣೆಯಿಂದ ನಮಗೀಯುವ ಅನುಗ್ರಹವೇ ಅನುಗ್ರಹ. (ಅಸ. ಮೊ. ವರ್ ಶ್ಲೋಕ ೨)

'ಓ ಭಗವಾನ್, ನೀನು ಹೇಗೆ ತಾನೆ ನಿನ್ನ ಸ್ವಂತ ಮಕ್ಕಳ ವಿಷಯದಲ್ಲಿ ಕೋಪಮಾಡಿಕೊಳ್ಳಬಲ್ಲೆ ? ನೀನವರಿಗೆ ಸೇರಿರುವಂತೆಯೆ ಅವರು ನಿನಗೆ ಸೇರಿದ್ದಾರೆ. (ಶ್ರೀರಾಗ. ಮೊ)

ಒಬ್ಬ ವ್ಯಕ್ತಿ ಮಾಡುವ ಒಳಿತು ಕೆಡುಕುಗಳಿಗೆ ತಕ್ಕ ಪ್ರತಿಫಲ ಸಿಗುತ್ತದೆ. (ವರ್. ಅಸ. ಮೊ)

ಮಿತ್ರರೆ, ನಮ್ಮ ಪ್ರಭುವಾದ ಭಗವಂತನ ಶಾಸನವನ್ನಳಿಸುವುದು ಶಕ್ಯವಿಲ್ಲ. (ರಾಮಕಲಿ. ಮೊ)

ಮನಸ್ಸೊಂದು ಹಾಳೆ; ಅದರ ಮೇಲೆ ನಮ್ಮ ಸತ್ಕರ್ಮ ದುಷ್ಕರ್ಮಗಳ ಮಸಿಯಲ್ಲಿ ಭೂತಕಾಲದ ಸಂಚಿತಾನುಭವಗಳೆಲ್ಲ ದಾಖಲಾಗಿವೆ. ಆದರೆ ನಮ್ಮ ಭಗವಂತನ ಗುಣಗಳೂ ಅಪಾರ....ಏಕೆಂದರೆ ಭಗವಂತನ ಮಧು ನಾಮದಿಂದ ನಮ್ಮನ್ನು ಅನುಗ್ರಹಿಸುವ ಗುರು ಸಿಕ್ಕಿದರೆ ಕಸವೂ ಕಸವರ ವಾಗುತ್ತದೆ ಮತ್ತು ದೇಹದ ಅಗ್ನಿಗಳು ನಂದುತ್ತವೆ. (ಮರು. ಮೊ)

## ಆತ್ಮ ಮತ್ತು ಪರಮಾತ್ಮ

ಕೃಷ್ಣ ದೇವರದೇವನಾಗಿರಬಹುದು, ಆದರೆ ಮಾನವನ ಆತ್ಮ ಅವನಿಗಿಂತ ಎತ್ತರ. (ಅಸ. ಮೊ. ವರ್ ಶ್ಲೋಕ ೨)

ವ್ಯಕ್ತಿ ಆತ್ಮಕ್ಕೆ ಶರಣಾದಾಗ ಆನಂದ ತುಂದಿಲನಾಗುತ್ತಾನೆ ; ಅನಂತರ ದೇಹ ಬೂದಿಯಾಗಿ ಅವನ ಆತ್ಮ ನಿರ್ಗಮಿಸುತ್ತದೆ.

(ಅಸ. ಮೊ. ವರ್. ಪಾರಿ ೬)

ನಿಜವಾದ ಗುರು ದಿವ್ಯವಚನವನ್ನು ನೀಡುವುದಕ್ಕೆ ಮುನ್ನ ಈ ಆತ್ಮ ಅನೇಕ ಜನ್ಮಗಳ ಮೂಲಕ ತೊಳಲಾಡಿತ್ತು. (ಆಸ. ಮೊ. ಪರ್ ಪೌರಿ ೬)

ಶುದ್ಧದೇಹದಲ್ಲಿರುವ ಪರಿಶುದ್ಧ ಆತ್ಮಹಂಸದಲ್ಲಿ, ನಿರ್ಲಿಪ್ತ ಭಗವಂತನ ನಾಮ ನೆಲೆಗೊಂಡಿರುತ್ತದೆ. ಅದು ಎಲ್ಲ ದುಃಖಗಳನ್ನೂ ಮಧುರ ಸುಖ ಗಳೆಂಬಂತೆ ಆಸ್ವಾದಿಸುತ್ತದೆ; ಅದು ಮತ್ತೆ ದುಃಖಕ್ಕೊಳಗಾಗುವುದಿಲ್ಲ. (ಮಾರು. ಮೊ 14)

ದೇಹಾತ್ಮಗಳು ಪರಸ್ಪರ ಪ್ರೇಮಮಯಿಗಳು; ಪುರುಷಾತ್ಮ ಯೋಗಿಯಂತೆ ನಿರ್ಲಿಪ್ತವಾಗಿರುತ್ತದೆ; ದೇಹವಾದರೊ ಚೆಲುವೆಯಾದ ಹೆಣ್ಣಿನಂತೆ. ಅಹೋ, ಆತ್ಮ ಅನಂತ ಸುಖಗಳನ್ನನುಭವಿಸಿ ಬಳಿಕ ಹಾರಿಹೋಗುತ್ತದೆ; ಹಾಗೆ ಮಾಡುವಾಗ ತನ್ನ ವಧುವನ್ನು ಕೇಳುವುದಿಲ್ಲ. (ಸುಹು. ಮೊ 8)

ದೇವರು ಆತ್ಮದಲ್ಲಿರುತ್ತಾನೆ; ಆತ್ಮ ದೇವರಲ್ಲಿರುತ್ತದೆ. (ಭೈರೊ. ಮೊ)

ವ್ಯಕ್ತಿಪ್ರಜ್ಞೆ ಸಾಯುತ್ತದೆ, ಅವನ ಹೋರಾಟ ಅಳಿಯುತ್ತದೆ, ಸ್ವಾಭಿ ಮಾನ ಮರೆಯಾಗುತ್ತದೆ, ಆದರೆ ಸರ್ವವನ್ನೂ ಕಾಣುವ ಆತ್ಮ ಅವಿನಾಶಿ. (ಪೌರಿ. ಮೊ)

ಹನಿ ಸಾಗರದಲ್ಲಿರುತ್ತದೆ, ಅಂತೆಯೆ ಸಾಗರ ಹನಿಯಲ್ಲಿ. (ರಾಮಕಲಿ. ಮೊ)

## ನಿಜವಾದ ಯೋಗ

ಪಥವನ್ನರಿತವನೆ ನಿಜವಾದ ಯೋಗಿ. (ಧನಶ್ರೀ. ಮೊ 7)

ಯೋಗವೆಂಬುದು ಕೇಸರಿ ವಸ್ತ್ರದಲ್ಲಿಲ್ಲ, ಯೋಗದಂಡದಲ್ಲಿಲ್ಲ ಅಥವಾ ಭಸ್ಮ ಲೇಪದಲ್ಲಿಲ್ಲ. ಅದು ಕಿವಿಯುಂಗುರಧಾರಣೆಯಲ್ಲಿಲ್ಲ, ತಲೆ ಬೋಳಿಸಲ್ಲಿಲ್ಲ, ಅಥವಾ ಕೊಂಬೂದಿಕೆಯಲ್ಲಿಲ್ಲ. ಮೋಹಗಳ ನಡುವೆ ನಿರ್ಲಿಪ್ತವಾಗಿ ಉಳಿಯು ವಾತ ಯೋಗದ ನಿಜವಾದ ಸ್ಥಿತಿಯನ್ನೈದುತ್ತಾನೆ. ಕೇವಲ ಮಾತಿನಿಂದ

ಯಾರೂ ಯೋಗಿಯಾಗುವುದಿಲ್ಲ. ಸೃಷ್ಟಿಯನ್ನೆಲ್ಲ ಸಮಭಾವದಿಂದ ನೋಡುವಾತ ನಿಜವಾದ ಯೋಗಿಯೆನಿಸಿಕೊಳ್ಳುತ್ತಾನೆ. ಯೋಗ ಗೋರಿಗಳಲ್ಲಿಲ್ಲ, ಸ್ಮಶಾನದಲ್ಲಿಲ್ಲ .ಸಮಾಧಿಸ್ಥಿತಿಯ ನಟನೆಯಲ್ಲಿಲ್ಲ. ಜಗತ್ತಿನ ಅಲೆದಾಟದಲ್ಲಿ ಹಾಗೂ ತೀರ್ಥಸ್ನಾನಗಳಲ್ಲಿ ಯೋಗವಿಲ್ಲ. ಮೋಹಗಳ ನಡುವೆ ನಿರ್ಲಿಪ್ತನಾಗಿರಬಲ್ಲನಾದರೆ, ಅಂತಹ ವ್ಯಕ್ತಿ ಯೋಗದ ನಿಜಸ್ಥಿತಿಯನ್ನು ಪಡೆಯುತ್ತಾನೆ. (ಸುಹಿ. ಮೊ 8)

ನಾನಕ್ ಹೇಳುತ್ತಾನೆ: "ಜೀವಿಸಿದ್ದರೂ ಅಹಂಕಾರದ ವಿಷಯದಲ್ಲಿ ಸತ್ತಂತಿರಿ; ಊದದಿದ್ದರೂ ಮೊಳಗುವಂತೆ ಕಹಳೆ ಯೋಗವನ್ನಾಚರಿಸಿ; ಇದರಿಂದ ವ್ಯಕ್ತಿ ನಿರ್ಭಯಸ್ಥಿತಿಯನ್ನೈದುತ್ತಾನೆ. ಮೋಹಗಳ ನಡುವೆ ನಿರ್ಲಿಪ್ತನಾಗಿ ಉಳಿಯುವಾತ ಯೋಗದ ನಿಜಸ್ಥಿತಿಯನ್ನು ಪಡೆಯುತ್ತಾನೆ. (ಸುಹಿ. ಮೊ 8)

## ಪ್ರಾರ್ಥನೆ

ನಾನು ಪುಣ್ಯಹೀನನಾಗಿರುವಾಗ, ಓ ಪ್ರಭುವೆ! ನಿನ್ನನ್ನೆಂತು ಪಡೆಯಲಿ? ನನ್ನಲ್ಲಿ ಸೌಂದರ್ಯವಿಲ್ಲ, ಹೊಳೆಯುವ ಕಂಗಳಿಲ್ಲ, ಕುಟುಂಬವಿಲ್ಲ, ಸಂಸ್ಕಾರವಿಲ್ಲ, ಮಧುರವಾಕ್ಕುಗಳಿಲ್ಲ. ಪ್ರತಿಭಾನವಾಗಲಿ ಬುದ್ಧಿಯಾಗಲಿ ನನಗಿಲ್ಲ; ನಾನು ಅಜ್ಞಾನಿ, ಅವಿವೇಕಿ. ನಾನು ನಿನ್ನ ಪಾದಕ್ಕೆ ಶರಣಾಗುವಂತೆ ಹರಸು, ಪ್ರಭು! ನೀನು ನನ್ನನ್ನು ಪ್ರೀತಿಸದಿದ್ದರೆ, ನಾನು ಮಾಯಾವಶನಾಗಿ ಸಂಶಯ ಭ್ರಾಂತಿಗೆ ಜೋತುಬಿದ್ದಿದ್ದರೆ ನನ್ನ ಜಾಣತನದಿಂದೇನು ಪ್ರಯೋಜನ? ನನ್ನ ಅಹಂಕಾರವಳಿದು ನಾನು ನಿನ್ನಲ್ಲಿ ಐಕ್ಯಗೊಂಡು ನಿನ್ನ ವಧುವಾದಾಗ ಮಾತ್ರ ಭೂಮಿಯ ನವನಿಧಿಗಳೆಲ್ಲ ಕೈಸೇರುತ್ತವೆ. ಜನ್ಮಜನ್ಮಗಳಲ್ಲಿ ನಾನು ನಿನ್ನಿಂದ ವಿಯೋಗಗೊಂಡು ದುಃಖಿಸಿದೆ. ಈಗ ನನ್ನ ಕೈ ಹಿಡಿದುಕೋ, ನನ್ನೊಲವೇ, ದೇವರೇ, ದೊರೆಯೇ! (ಸುಹಿ. ಮೊ. ಅಷ್ಟಪದಿ)

ಓ ದೇವ! ಚಿನ್ನ ಬೆಳ್ಳಿ ಮುತ್ತು ರತ್ನಗಳೆಲ್ಲ ಭೋಗ್ಯ; ಆದರೆ ಇವು ಕೂಡ ನಿನ್ನ ಕೊಡುಗೆಗಳು; ಆದರೆ ನಾನವುಗಳನ್ನು ಪ್ರೀತಿಸುತ್ತೇನೆ,

ನಿನ್ನನ್ನಲ್ಲ. ಕಲ್ಲು ಮಣ್ಣಿನ ಸೌಧಗಳು ತಮ್ಮ ವೈಭವದಿಂದ ನನ್ನನ್ನು ಆಕರ್ಷಿಸಿದುವು ; ಆದರೆ ನಾನು ನನ್ನೊಲವಿನ ಪಕ್ಕದಲ್ಲಿ ಕುಳಿತುಕೊಳ್ಳಲಿಲ್ಲ. (ನನ್ನ ತಲೆಯ) ಗಗನದಲ್ಲಿ (ಆಯುಸ್ಸಿನ) ಕಾಜಾಣ ಚೀರುತ್ತಿವೆ, (ಬೂದು ಗೂದಲಿನ) ಕೊಕ್ಕರೆ ನನ್ನ ಮೇಲೆರಗಿವೆ. ದಿಟದ ಮನೆಗೈದಲು ನಾನು ಸಿದ್ಧ ನಿದ್ದೇನೆ. ನಿನ್ನನ್ನೆಂತು ಈಗ ಎದುರಿಸಲಿ ? ನಿದ್ದೆಯಲ್ಲಿ ಜೀವನ ರಾತ್ರಿ ವ್ಯತ್ಯ ಪ್ರಭಾತಕ್ಕೆ ತಿರುಗಿತು ; ನಾನು ದಾರಿತಪ್ಪಿ ನಿನ್ನಿಂದ ಪ್ರತ್ಯೇಕವಾದೆ. ಈಗ ದುಃಖವೊಂದೇ ನನಗೆ ಆಶ್ರಯ. ನೀನು ಪುಣ್ಯವಂತ, ನಾನು ಪುಣ್ಯ ಹೀನ. ಓ ಪ್ರಭು, ಇದೊಂದೇ ನಿನಗೆ ನಾನಕನ ಪ್ರಾರ್ಥನೆ : ಈ ಹಲವು ಇರುಳುಗಳಲ್ಲಿ ನಿನ್ನೆಲ್ಲ ವಧುಗಳನ್ನು ನಿನ್ನ ಸಂಗದಿಂದ ಅನುಗ್ರಹಿಸಿದ್ದೀಯೆ : ನನಗೂ ಒಂದು ಇರುಳಿಲ್ಲವೆ ?" (ಸುಹಿ. ಮೊ. ಕುಚಜಿ)

ನೀನು ನನ್ನೊಡನಿರಲು ನಾನು ಸರ್ವಸ್ವವನ್ನು ಪಡೆಯುತ್ತೇನೆ. ಓ ಪ್ರಭೂ, ನೀನೆ ನನ್ನೊಡೆಯ, ನನ್ನ ಬಂಡವಾಳ. ನೀನು ನನ್ನಲ್ಲಿದ್ದಾಗ ನನಗೆ ಶಾಂತಿಯೊದಗುತ್ತದೆ. ನೀನು ನನ್ನಲ್ಲಿಗೆ ಬಂದಾಗ ನಾನು ಅನುಗ್ರಹೀತ. ನೀನು ಸಂಕಲ್ಪಿಸಿದರೆ ನಾನು ರಾಜನಾಗುತ್ತೇನೆ ; ಅಥವಾ ಲೋಕವಿಮುಖ ನಾದ ಭಿಕ್ಷುಕನಾಗುತ್ತೇನೆ. ನಿನ್ನ ಸಂಕಲ್ಪದಿಂದ ಸಾಗರಗಳು ಹೃದಯಾ ಕಾಶದಲ್ಲಿ ಭೋರ್ಗರೆಯುತ್ತವೆ. ನಿನ್ನ ಸಂಕಲ್ಪದಲ್ಲಿ ನಾನು ಇಹಜೀವನದ ಸಮುದ್ರವನ್ನು ದಾಟುತ್ತೇನೆ ; ನಿನ್ನ ಸಂಕಲ್ಪದಿಂದ ನಮ್ಮ ಹೊರೆ ನಡುನೀರಿ ನಲ್ಲಿ ಮುಳುಗಿಹೋಗುತ್ತದೆ. ನಿನ್ನ ಸಂಕಲ್ಪದಿಂದ ವರ್ಣಮಯ ವ್ಯಕ್ತಿ ಯಾಗಿ ಕಾಣುತ್ತೀಯೆ ; ಬಳಿಕ ಓ ಗುಣನಿಧಿ, ನಿನ್ನ ಸ್ತುತಿಯಿಂದ ತುಂಬಿ ಹೋಗುತ್ತೇನೆ, ನಿನ್ನ ಸಂಕಲ್ಪದಿಂದ ನೀನು ಭಯಂಕರನಾಗಿ ಕಾಣುತ್ತೀಯೆ, ನಾನು ಆಗಮನ ನಿರ್ಗಮನಗಳ ಚಕ್ರಕ್ಕೆ ಬದ್ಧನಾಗುತ್ತೇನೆ. ಅಪ್ರಮೇಯ ಅನುಪಮ ವಿಭುವೆ ನಿನ್ನನ್ನು ಕಂಡು ನಿನಗೆ ಶರಣಾಗುತ್ತೇನೆ. ನಿನ್ನ ಬಳಿ ಏನನ್ನು ಬೇಡಲಿ ? ನಿನಗಾಗಿ ಹಸಿದಿದ್ದೇನೆ, ಬಾಯಾರಿದ್ದೇನೆ ಎಂಬುದನ್ನು ಬಿಟ್ಟು ಮತ್ತೇನೆಂದು ಹೇಳಿಕೊಳ್ಳಲಿ ? (ಸುಹಿ. ಮೊ. ಸಚಜಿ)

---

